# ಶಿಲಾವನಿತೆ

ಅರ್ಥಾತ್

# ಅಹಲ್ಯೋದ್ಧಾರ

— ಸಂಗ್ರಾಹಕರು ಮತ್ತು ಪ್ರಕಾಶಕರು —


**ಕೆ. ಎಸ್. ಕುಲಕರ್ಣಿ, ಬುಕ್‌ಡಿಪೋ**

ಸ್ಟೇಶನ್‌ರೋಡ, ಹುಬ್ಬಳ್ಳಿ

— ಮುದ್ರಕರು —

ಎಸ್. ಎಸ್. ಕಾರಂತ

ಆಶಾ ಪ್ರೆಸ್, ರಾಧಾಕೃಷ್ಣಗಲ್ಲಿ, ಹುಬ್ಬಳ್ಳಿ

೧೯೫೩

ಬೆಲೆ: ಆರು ಆಣೆ

# ಅನುಕ್ರಮಣಿಕೆ

# ಶಿಲಾವನಿತೆ

ಅರ್ಥಾತ್

# ಅಹಲ್ಯೆಯ ಕಥೆ

## ೧. ಅಹಲ್ಯಾ ಬಾಲಿಕೆ

ಹಿಂದೊಂದು ಕಾಲದಲ್ಲಿ ನಮ್ಮ ಈ ಆರ್ಯಾವರ್ತವು 'ಪುಣ್ಯಭೂಮಿ' ಎಂದು ಹೆಸರಾಗಿದ್ದಿತು. ಆಗ ಇಲ್ಲಿಯ ಆರ್ಯಜನಾಂಗದ ಶ್ರೇಷ್ಠತೆ ಜಗದ್ವಿಖ್ಯಾತವಾಗಿತ್ತು. ಅತ್ಯಂತ ರಮಣೀಯವಾದ ಸುವರ್ಣ ಭೂಮಿ ಎನ್ನಿಸಿದ ಇಲ್ಲಿ ಅಂಗ-ವಂಗಾದಿ ಐವತ್ತಾರು ದೇಶಗಳಿದ್ದವು. ಅವೆಲ್ಲ ಸಕಲ ಸಂಪತ್ಸಮೃದ್ಧಿಗಳಿಂದಯುಕ್ತವಾಗಿಒಂದರಿಂದಿನ್ನೊಂದು ಕೀಳ್ತರಗತಿಯಲ್ಲಿದೆ ಎಂದು ಅದಾರಿಂದಲೂ ಹೇಳಿಸಿಕೊಳ್ಳದೆ ಹೆಸರಾಗಿ ಮೆರೆದಿದ್ದವು. ಪ್ರತಿಯೊಂದು ದೇಶವು ರಾಜ-ಪ್ರಜರ ಧರ್ಮಗಳಲ್ಲಿ ನ್ಯೂನತೆಯನ್ನು ಕಾಣದೆ ಸೌಖ್ಯದ ಉನ್ನತ ಶಿಖರಕ್ಕೇರಿದ್ದಿತು. ಜನತೆಯಲ್ಲಿಯ ಬುದ್ಧಿ ವೈಭವವೂ ನೀತಿಮತ್ತೆಯೂ ಉಜ್ವಲವಾಗಿದ್ದವು. ವರ್ಣಾಶ್ರಮಿಗಳ ಧರ್ಮ ವೃತ್ತಿಗಳಿಗೆ ಚ್ಯುತಿಯಿರಲಿಲ್ಲ. ಸತ್ಯ-ಅಹಿಂಸೆಗಳಿಗೆಲ್ಲೆಡೆಯಲ್ಲಿ ಪ್ರಾಮುಖ್ಯತೆಯಿದ್ದಿತು. ಲಿಂಗ ಭೇದವೊಂದನ್ನುಳಿದು ಇನ್ನೊಂದು ಕೊಂಕು ಯಾರಲ್ಲಿಯೂ ಇದ್ದಿರಲಿಲ್ಲ. ಆಗಿನವರ ನಡೆ-ನುಡಿ, ಆಚಾರ-ವಿಚಾರ, ವಿದ್ಯೆಬುದ್ಧಿಗಳಲ್ಲಿ ಕೂಡ ಅದನ್ನು ಕಲ್ಪಿಸುವದು ಅಸಾಧ್ಯವಾಗಿದ್ದಿತು. ಒಟ್ಟಿನ ಮೇಲೆ ಸ್ವರ್ಗದ ಸೊಬಗನ್ನು ವರ್ಣನೆಯಿಂದ ಕೇಳದೆ ಪ್ರತ್ಯಕ್ಷ ಕಾಣುವ ಬಯಕೆಯುಳ್ಳವರಿಗೆಲ್ಲ ಆಗಿನ ನಮ್ಮ ಆರ್ಯಾವರ್ತದರ್ಶನದಿಂದಲೇ ತೃಪ್ತಿಯಾಗುವಂತಿದ್ದಿತು. ಸದ್ಧರ್ಮಪೂರಿತ ರಾಮರಾಜ್ಯವೆಂದು ಖ್ಯಾತಿ ಪಡೆದ ಅಯೋಧ್ಯಾಪತಿ ಶ್ರೀರಾಮನ ಆಳಿಕೆಯು ಆಗಿನ ಕಾಲದಲ್ಲಿ ಇಲ್ಲಿಯೇ ಉದಯವಾದುದು.

ಈಗ ನಾವು ಬರೆಯುವ ಅಹಲ್ಯೆಯ ಕಥೆಯ ಕಾಲವು ರಾಮರಾಜ್ಯದ ಹಿಂದಿನ ಕೆಲಕಾಲವನ್ನು ಕೂಡಿಕೊಂಡು ಮುಂದೆ ನಡೆದದ್ದಾಗಿದೆ. ಆಗಿನ ಕಾಲದಲ್ಲಿ ಪ್ರಸಿದ್ಧವಾಗಿದ್ದ ಚಪ್ಪನ್ನ ದೇಶಗಳಲ್ಲಿ 'ಕಾಮರೂಪ' ಎಂಬ ದೇಶವೇ ನಮ್ಮ ಕಥಾನಾಯಿಕೆಯ ಜನ್ಮನಾಡು. ಇಷ್ಟೇ ಅಲ್ಲ; ಆಕೆ ಬೆಳೆದ, ವಿದ್ಯೆಕಲಿತ, ಗೌತಮನೊಡನೆ ಪರಿಣಯಗೊಂಡ, ಹಾಗು ಆತನ ಶಾಪದಿಂದ ಶಿಲೆಯಾದ ನಾಡು ಕೂಡ ಅದೇ ಆಗಿತ್ತು. ಮುಂದೆ ಶ್ರೀರಾಮನು ವಿಶ್ವಾಮಿತ್ರನ ಯಜ್ಞರಕ್ಷಣೆಗೈದು ಸೀತಾಸ್ವಯಂವರ ಸಮಾರಂಭಕ್ಕಾಗಿ ಮಿಥಿಲೆಗೆ ಪ್ರಯಾಣ ಬಳೆಸಿದಾಗ ಆ ಶಿಲಾವನಿತೆ ಅರ್ಥಾತ್ ಅಹಲ್ಯೆಯು ಶ್ರೀರಾಮನ ಪಾದಸ್ಪರ್ಶದಿಂದ ಶಾಪಮುಕ್ತಳಾದುದೂ ಇದೇ ನಾಡಿನಲ್ಲಿ. ಸದ್ಯ ಈ ನಾಡನ್ನು ಗುರುತಿಸಿ ಹೇಳುವದಾದರೆ ಭಾರತ ವಿಚ್ಛೇದ ಪೂರ್ವದಲ್ಲಿದ್ದ ಪೂರ್ವಬಂಗಾಲವೆಂಬ ಹೆಸರಿನ ನಾಡೇ ಆ ಕಾಮರೂಪ ದೇಶವು.

ಇಂತಿದ್ದ ಆ ದೇಶದಲ್ಲಿ ನಮ್ಮ ಭರತಖಂಡವನ್ನು ಪುನೀತವನ್ನಾಗಿ ಮಾಡುವ ಗಂಗಾದಿ ಪ್ರಸಿದ್ಧ ಪುಣ್ಯವಾಹಿನಿಗಳಲ್ಲಿ ಒಂದಾದ 'ಬ್ರಹ್ಮಪುತ್ರೆ'ಯು ಅಲ್ಲಿ ಹರಿದಿರುವಳು. ಅವಳು ತನ್ನ ತಂದೆಯೆನ್ನಿಸಿದ ಪರ್ವತರಾಜನ ಮಾನಸದಲ್ಲಿಂದ ಪೂರ್ವದ್ವಾರದವರೆಗೆ ಬಂದು ನೆಟ್ಟ ನೆತ್ತಿಯಿಂದ ಸಮುದ್ರರಾಜನನ್ನು ನಿರೀಕ್ಷಿಸುತ್ತ ತೆಂಕಣ ದಿಕ್ಕಿಗಿಳಿದು ಪ್ರಥಮ ಪಾದವನ್ನಿಟ್ಟುದುದು ಈ ಕಾಮರೂಪ ದೇಶದಲ್ಲಿಯೇ ಎಂದು ಹೇಳಬಹುದು. ಬ್ರಹ್ಮಪುತ್ರೆಯ ಈ ಗತಿಯಿಂದ 'ಸ್ತ್ರೀಯಳು ತನ್ನ ತಂದೆಯ ಮನೆಯಲ್ಲಿ ಹುಟ್ಟಿ ಬೆಳೆದರೂ ಕೊನೆಗೆ ಅವಳಿಗೆ ಪತಿಯ ಮನೆಯೇ ಗತಿ' ಎಂಬ ನೀತಿಯನ್ನು ಕಾಣಬಹುದು. ಇಂಥ ಶೀಲವತಿ ಬ್ರಹ್ಮಪುತ್ರೆ ಸಂಚಲಿಸಿದ ಆ ಕಾಮರೂಪ ಪ್ರದೇಶವೂ ಆ ಪ್ರದೇಶದಲ್ಲಿ ಜನಿಸಿದ ನಮ್ಮ ಕಥಾನಾಯಿಕೆ ಶಿಲಾವನಿತೆ ಅರ್ಥಾತ್ ಅಹಲ್ಯೆಯೂ ಧನ್ಯ! ಧನ್ಯರು!

ಈ ಪ್ರಕಾರ ಶೋಭಿಸುವ ಆ ಕಾಮರೂಪದೇಶವು ನಮ್ಮ ಅಹಲ್ಯೆಯ ತಂದೆ ಬ್ರಹ್ಮರಾಜನ ಆಧಿಪತ್ಯಕ್ಕೆ ಸಂಪೂರ್ಣ ಒಳಪಟ್ಟಿದ್ದಿತು. ತಿಳಿಯಾಗಿ ಹೇಳುವದಾದರೆ ಅವನೇ ಆ ನಾಡಿನ ಏಕಛತ್ರಾಧಿಪನಾಗಿದ್ದನು. ಆ ರಾಜನ ಮಿಗಿಲಾದ ಐಶ್ವರ್ಯವು ಸಂತತಿಯೊಂದರ ಹೊರತು ಇನ್ನೊಂದು ಕುಂದಿನಿಂದ ಕೂಡಿರಲಿಲ್ಲ. ಪತಿಪರಾಯಣೆಯಾದ ಆತನ ಪತ್ನಿ, ಧರ್ಮಾತ್ಮ

ನಾದ ಪತಿ, ಇವರಿಬ್ಬರಲ್ಲಿಯೂ ಒಂದೇ ಒಂದಾದ ಆ ಬಯಕೆ ಮಾತ್ರ ವ್ಯಕ್ತ ವಾಗದಿರುತ್ತಿದ್ದಿಲ್ಲ. ತಮ್ಮ ಸೌಭಾಗ್ಯಕ್ಕೆ ಗಂಡೇ ಆಗಲಿ, ಹೆಣ್ಣೇ ಆಗಲಿ ಯಾವದೊಂದು ಸಂತಾನ ದೊರೆಯಲಿ, ಎಂಬ ಹೆಬ್ಬಯಕೆಯಿಂದ ಅವರು ಅದೆಷ್ಟೋ ಶಾಸ್ತ್ರಸಮ್ಮತವಾದ ವ್ರತೋದ್ಯಾಪನೆ ದಾನಧರ್ಮಾದಿಗಳನ್ನು ಮಾಡಿದರು. ಬಹುಕಾಲಗಳೆಯಲು ತತ್ಫಲವಾಗಿ ಶುಭದಿನವೊಂದರಲ್ಲಿ ಆ ರಾಣಿಯು ಸಲ್ಲಕ್ಷಣವಾದ ಹೆಣ್ಣುಮಗುವನ್ನುಹೆತ್ತಳು. ಹಡೆದ ಕೆಲತಾಸು ಗಳಲ್ಲಿ ತಾನು ಮೃತಪಟ್ಟಳು!

ಅಪತ್ಯ ಜನಿಸಿದುದಕ್ಕೆ ರಾಜನಿಗೆ ಅದೆಷ್ಟೋ ಸಂತೋಷ! ಹಾಗು ಅದರ ಜೊತೆಗೆ ಅದೆಷ್ಟೋ ಪಟ್ಟು ಕಷ್ಟ. ಇಂತು ರಾಜನ ಹೃತ್ಪಟಲದ ಮೇಲೆ ಸುಖ-ದುಃಖಗಳ ಏಕೀಕರಣದ ಚಿತ್ರವು ಸ್ಪಷ್ಟವಾಗಿ ಮೂಡಿತು.

ದುರದೃಷ್ಟದಿಂದ ರಾಣಿಯು ಮೃತಳಾದಳು. ಅದಕ್ಕೂ ತನಗೆ ಹೆಣ್ಣು ಮಗಳು ಜನಿಸಿದುದಕ್ಕೂ ಆ ವಿಚಾರವಂತ ರಾಜನು ಕಂದಲಿಲ್ಲ-ಕುಂದಲಿಲ್ಲ. ಸಾಮಾನ್ಯರಂತೆ ಹೆಣ್ಣುಮಗಳೆಂದು ಬೀಳುಗಳೆಯಲಿಲ್ಲ. ಏನೋ ಇನ್ನು ಮುಂದಾದರೂ ಗಂಡು ಮಗು ಜನಿಸಬಹುದೆಂಬ ಹಂಬಲ ತಾಳಲೂ ಅವನಿಗೆ ಅವಕಾಶವುಳಿಯಲಿಲ್ಲ. ಆತನನ್ನು ವಾರ್ಧಿಕ್ಯವು ಆವರಿಸಿದ್ದುದರಿಂದ ದ್ವಿತೀಯ ಸಂಬಂಧದಿಂದ ಪುತ್ರನನ್ನು ಪಡೆದುಕೊಳ್ಳುವದೂ ಸಾಧ್ಯವಿರಲಿಲ್ಲ. ಏನೇ ಆಗಲಿ! ಈ ಹುಟ್ಟಿದ ಹೆಂಗೂಸೇ ತನ್ನ ಉತ್ತರಾಧಿಕಾರಿಯು ಎಂದು ಆತನು ಆಗಲೇ ಪ್ರಸಿದ್ಧಪಡಿಸಿದನು. ಮತ್ತು ಮಾತೃಹೀನವಾದ ಆ ಕೂಸಿನ ಸಂಗೋಪನದ ವ್ಯವಸ್ಥೆ ಮಾಡಿದನು. ತಾನು ತನ್ನ ರಾಜಕಾರ್ಯದಲ್ಲಿ ಮೊದಲಿ ನಂತೆ ಸದಾವ ಕಾಲವೂ ಮನಸ್ಸು ತೊಡಗಿಸದೆ ಮಂತ್ರಿಗಳ ಮೇಲೆಯೇ ಆ ಭಾರವನ್ನು ಚೆಲ್ಲಿಕೊಟ್ಟು ಕೂಸಿನ ಸಂಗೋಪನಕ್ಕಾಗಿ ವೇಳೆ ಕಳೆಯ ಹತ್ತಿದನು.

ಕೂಸು ಹುಟ್ಟಿದ ಕೆಲ ದಿನಗಳ ಮೇಲೆ ಅದಕ್ಕೆ ಜಾತಕರ್ಮ-ನಾಮ ಕರಣಾದಿ ಸಂಸ್ಕಾರಗಳನ್ನು ಮಾಡಿಸಿದನು. ಪತ್ನೀವಿಯೋಗದ ತಾಪಕ್ಕೆ ಮನಸ್ಸಿನಲ್ಲಿ ಅವಸರಗೊಡದೆ ಸಂತತಿ ಪ್ರಾಪ್ತಿಯಾದ ಸಂತೋಷಕ್ಕೆಂದ್ಧ ದೊಡ್ಡ ಸಮಾರಂಭವನ್ನು ಹೂಡಿದನು. ಅಪರೂಪವಾಗಿ ತನಗೆ ಜನಿಸಿದ ಮಗಳಿಗೆ 'ಅಹಲ್ಯೆ'ಎಂದು ಹೆಸರಿಡಿಸಿ ನಾಮಕರಣ ಸಂಸ್ಕಾರ ಜರುಗಿಸಿದನು.

ಅಹಲ್ಯೆಯು ಬಲು ಚೆಲುವೆ. ಹುಟ್ಟಿದಾಗಲೇ ಅವಳ ಚೆಲುವಿಕೆಯು ಕಂಡವರಿಗೆಲ್ಲ ಕುತೂಹಲ ದೃಶ್ಯವಾಗಿ ಬಿಟ್ಟಿದ್ದಿತು!

ತಂದೆಯಿಂದ ರಕ್ಷಿತಳಾಗುತ್ತಿದ್ದ ಆಕೆಯು ದಿನ ದಿನವೂ ಚಂದ್ರಕಲೆಯಂತೆ ವರ್ಧಿಸಹತ್ತಿ ಶೈಶವವನ್ನು ಬೆಳಗ ಹತ್ತಿದಳು. ತಂದೆಯ ಮುಂಗೈ ಮೇಲೆ ಅರಗಿಳಿಯಂತೆ ಕುಣಿಯುವಳು, ನಲಿಯುವಳು. ಹೀಗೆ ಕೆಲ ದಿನಗಳೆಯಲು ಬರಬರುತ್ತ ತಪ್ಪೆಜ್ಜೆಯನ್ನಿಕ್ಕ ಹತ್ತಿದಳು. ತೊದಲು ನುಡಿಯಾಡುತ್ತ ಲಾಲಾರಸ ಸುರಿಸುವಳು. ಇಂತು ಶೈಶವಾವಸ್ಥೆಯನ್ನು ನೀಗಿ ಬಾಲಿಕಾವಸ್ಥೆಗೆ ಬಂದು ಮುಟ್ಟಿದಳು.

ಈಗ ಆಕೆಗೆ ಐದು ವರುಷ. ಮಗಳ ನಿರೀಕ್ಷಣೆಯಿಂದ ರಾಜನಿಗೆ ಬಲು ಹರುಷ! ತನ್ನ ಉತ್ತರಾಧಿಕಾರಿಯೀಕೆ ಎಂಬ ನಿಶ್ಚಿತ ಭಾವನೆಯಿಂದ ಆತನು ಯೋಗ್ಯ ಶಿಕ್ಷಕರಿಂದ ಆಕೆಗೆ ವಿದ್ಯೆ ಕಲಿಸುವ ಏರ್ಪಾಡು ಮಾಡಿದನು. ಗಂಡು ಮಕ್ಕಳಿಗೆ ಅರ್ಥಾತ್ ರಾಜಕುಮಾರರಿಗೆ ಅವಶ್ಯವಿರುವ ಎಲ್ಲ ಶಿಕ್ಷಣವು ಆಕೆಗೆ ದೊರೆಯುವಂತೆ ಮಾಡಿದನು. 'ಗುರುದೇವ' ಎಂಬ ತನ್ನ ಕುಲಗುರುವಿನಿಂದ ಆಕೆಗೆ ನ್ಯಾಯ–ವ್ಯಾಕರಣ–ಶಾಸ್ತ್ರ ಮುಂತಾದ ಎಲ್ಲ ವಿಷಯಗಳನ್ನು ಕಲಿಸ ಹತ್ತಿದನು. ಆಕೆಯು ಗುರುದೇವನ ಗುರುಕುಲದಲ್ಲಿ ಎಲ್ಲ ವಿದ್ಯಾರ್ಥಿ – ವಿದ್ಯಾರ್ಥಿನಿಗಳ ಜೊತೆ ಸೇರಿ ಅಭ್ಯಾಸ ಮಾಡುವಳು, ಓದುವಳು. ತಿಳಿಯದ ಪಾಠಗಳ ಬಗೆಗೆ ಗುರುದೇವನಿಂದ ಹೇಳಿಸಿಕೊಳ್ಳುವಳು. ಈ ರೀತಿ ಆ ಅಹಲ್ಯೆಯು ಅಭ್ಯಾಸ ನಡೆಯಿತು.

ಗುರುದೇವನ ಗುರುಕುಲವೆಂದರೆ ಅಂಥಿಂಥದಲ್ಲ. ಹಲವಾರು ಶಿಷ್ಯ–ಶಿಷ್ಯೆಯರು ಶಿಕ್ಷಣದಿಂದ ಸುಸಂಸ್ಕೃತರಾಗುವ ಮಂದಿರವದು. ಅಲ್ಲಿ ವಿದ್ಯಾರ್ಥಿಗಳೆಲ್ಲರೂ ಗುರುಸೇವೆ ಗೈದು ನಿತ್ಯ ಪಾಠ ಕಲಿಯುವರು. ಈ ಪ್ರಕಾರದ ಗುರುಕುಲದಲ್ಲಿ ಅಹಲ್ಯೆಯು ಗುರುದೇವನ ಪಟ್ಟ ಶಿಷ್ಯಳಾಗಿ ಸಕಲ ವಿದ್ಯೆಗಳಲ್ಲಿ ತರಬೇತಾದಳು.

ರಾಜನು ಮೇಲೆ ಮೇಲೆ ಗುರುಕುಲಕ್ಕೆ ಹೋಗಿ ಅಲ್ಲಿಯ ವ್ಯವಸ್ಥೆಯ ಬಗೆಗೂ ಮಗಳ ಶಿಕ್ಷಣದ ವಿಷಯಕ್ಕೂ ಒಳ್ಳೇ ದಕ್ಷತೆ ತೆಗೆದುಕೊಳ್ಳುತ್ತಿದ್ದನು.

ಇಂತು ಅಹಲ್ಯೆಯು ಪ್ರಾಢ ದೆಸೆಗೆ ಬರುವ ವರೆಗೆ ಆ ಗುರುಕುಲದಲ್ಲಿ ವಿದ್ಯಾ ವ್ಯಾಸಂಗ ಮಾಡಿದಳು.

# ೨. ಗುರುದೇವನ ಆಶ್ರಮ

ಆ ಕಾಮರೂಪ ನಾಡಿನ ಪ್ರದೇಶದಲ್ಲಿ ಪ್ರವಹಿಸಿದ ಬ್ರಹ್ಮಪುತ್ರಿಯ ನೆರೆಯಲ್ಲಿ ವಿಶಾಲವೂ ರಮ್ಯವೂ ಆಗಿರುವ ವನವೊಂದು ಕಂಗೊಳಿಸುತ್ತಿರುವದು. ಆ ವನದ ಚದುರಳತೆಯದೆಷ್ಟೇ ಇರಲಿ ಅಲ್ಲಿ ನಮ್ಮ ಗುರುದೇವನ ಆಶ್ರಮದಂಥ ಅದೆಷ್ಟೋ ಋಷ್ಯಾಶ್ರಮಗಳು ಅಲ್ಲಲ್ಲಿ ಒಂದೊಂದು ಭಾಗದಲ್ಲಿ ಸ್ವತಂತ್ರವಾಗಿ ಮೆರೆಯುತ್ತಿದ್ದವು. ಅವುಗಳಲ್ಲೆಲ್ಲ ನಮ್ಮ ಗುರುದೇವನ ಆಶ್ರಮಸ್ಥಾನವೇ ಕಣ್ಣಿಗೆ ಎದ್ದು ಕಾಣಿಸಿ ಪ್ರಾಮುಖ್ಯತೆ ಪಡೆದಿದ್ದಿತು. ಅದೆಷ್ಟೋ ಋಷಿಕುಮಾರರೂ, ಅರಸು ಮಕ್ಕಳೂ ಅಲ್ಲಿ ಕಲಿಯುತ್ತಿದ್ದರು. ಇವರು ಸಿರಿವಂತರ ಮಕ್ಕಳು, ಇವರು ಬಡವರ ಮಕ್ಕಳು ಎಂಬ ಭೇದವಿಲ್ಲದೆ ಗುರು ಸೇವೆಯಲ್ಲಿ ತಲ್ಲೀನರಾಗಿ ಆ ಆಶ್ರಮದಲ್ಲಿ ಪಾಠಕಲಿಯುತ್ತಿದ್ದರು. ಬ್ರಹ್ಮ ಜಿಜ್ಞಾಸುಗಳಿಂದ ಆ ಋಷ್ಯಾಶ್ರಮವು ಕಾಮ-ಕ್ರೋಧಾದಿ-ದುರ್ವಿಕಾರಗಳಿಂದ ದೂರಾಗಿಸದಾಶಾಂತತೆಯಾಧಿಕ್ಯತೆಯಿಂದ ಗೌರವತೆಯನ್ನು ಹೊಂದಿ ಮೆರೆಯುತ್ತಿದ್ದಿತು. ಸಮಿಧೆ ಪುಷ್ಪಗಳನ್ನೆತ್ತಿ ತರುವ ಮುನಿಕುಮಾರರೂ, ಗವಾದಿಪ್ರಾಣಿಗಳ ಸಂಗೋಪನ ಕ್ರಿಯೆಯಲ್ಲಿ ನಿರತರಾದ ರಾಜಕುಮಾರರೂ, ಆಶ್ರಮದ ಕಾರ್ಯಗಳಲ್ಲಿ ನಿರತರಾದ ಮುನಿರಾಜಕುಮಾರಿಯರೂ ಇವರೆಲ್ಲ ನಾರುಮಡಿಯಿಂದಲಂಕೃತರಾಗಿ ಸದಾವ ಕಾಲವೂ ಅಲ್ಲಿ ಕಂಡುಬರುವರು. ಆಶ್ರಮದಲ್ಲಿ ಗುರುವಾಕ್ಯಗಳನ್ನುಲ್ಲಂಘಿಸದೆ ಗುರು ಪ್ರವಚನ ಪಾಠಗಳಲ್ಲಿ ಆಸಕ್ತರಾಗಿರುವ ಆ ವಿದ್ಯಾರ್ಥಿ ವಿದ್ಯಾರ್ಥಿನಿಯರ ನಿತ್ಯ ಕ್ರಮಗಳಲ್ಲೇನೊಂದೂ ಅಂತರವಿದ್ದಿರಲಿಲ್ಲ. ಗುರು ವಾಕ್ಯವೇ ಪ್ರಮಾಣವೆಂದು ಗ್ರಹಿಸಿಕೊಂಡ ಅಲ್ಲಿಯ ಶಿಷ್ಯವರ್ಗವು ಗುರುದೇವನ ಮುಖೋದ್ಗಳಿತ, ವೇದ ಶಾಸ್ತ್ರಾದಿಗಳ ವಚನಗಳನ್ನು ಲೋಹಚುಂಬಕದಂತೆ ಗ್ರಹಿಸುತ್ತಿರುವದು, ಪಡಿನುಡಿಯಿಂದ ಉಚ್ಚರಿಸುತ್ತಿರುವದು, ಸರಸ್ಸೀರದಲ್ಲಿ ಕುಳಿತ ಬಕಗಳಂತೆ ಮೌನ ಧ್ಯಾನದಲ್ಲಿ ನಿರತವಾಗಿರುವದು. ಗುರುದೇವನು ತನ್ನ ಕಾರುಣ್ಯಮಯ ಕಟಾಕ್ಷ ಕಿರಣಗಳನ್ನು ಎಲ್ಲ ಶಿಷ್ಯ – ಶಿಷ್ಯೆಯರ ಮೇಲೆ ಚಲ್ಲಿ ಅವರನ್ನು ಪ್ರಕಾಶಗೊಳಿಸುವಲ್ಲಿ ಸದಾದಕ್ಷನು. ಇಂತು ಗುರು – ಶಿಷ್ಯ ಸುವೇತವಾದ ಆ ಋಷ್ಯಾಶ್ರಮದ ಸೊಬಗನ್ನು ಸವಿಯಲು ಸುರಲೋಕದ

ಇಂದ್ರಾದಿ ದೇವತೆಗಳು ಕೂಡ ಹಾತೊರೆಯುತ್ತಿದ್ದರು. ಆದರೆ ಅವರು
ತಮ್ಮ ಸುರಸ್ಥಾನದಿಂದ ಅಂತರಿಸಿದಲ್ಲಿ, ಅದರಿಂದೆಲ್ಲಿ ದೂರಾಗುವೆವೋ ಎಂಬ
ಭಯ-ಮೋಹಗಳಿಂದ ಸ್ವರ್ಗದಲ್ಲಿಂದಲೇ ಈ ಸೊಬಗನ್ನು ನಿರೀಕ್ಷಿಸಿ
ಸಂತುಷ್ಟತೆ ಪಡೆಯುವರು. ಹಾಗು ಋಷಿಕುಮಾರರ ತೇಜಸ್ವಿತೆಯನ್ನು
ಕಂಡು ಅಸೂಯೆ ಪಡುವರು. ಆಶ್ರಮವಾಸಿ ರಾಜಕುಮಾರರನ್ನು ಕಂಡು
ಇವರಿಂದ ತಮ್ಮಸ್ಥಾನವೆಲ್ಲಿ ಗ್ರಹಿಸಲ್ಪಡುವದೋ ಎಂದು ಭಯಭೀತ
ರಾದರು. ಗುರುದೇವನ ಸನ್ನಿಧಿಯಲ್ಲಿ ಕುಳಿತು ವಿದ್ಯಾಭ್ಯಾಸ ಮಾಡುವ
ರಾಜಕುವರಿಯನ್ನು ನಿರೀಕ್ಷಿಸಿ ಅವರ ಸ್ವಾಭಾವಿಕಚೆಲುವಿಕೆಯನ್ನು ಕಂಡು
ಮೋಹಗೊಳ್ಳುವರು.

ನಮ್ಮ ಚರಿತ್ರ ನಾಯಿಕೆ ಅಹಲ್ಯೆಯೂ ಈ ಮೊದಲು ಹೇಳಿದ ಗುರು
ದೇವರ ಆಶ್ರಮದಲ್ಲಿ ಶಿಕ್ಷಣ ಪಡೆಯುತ್ತಿದ್ದಳು. ಅತ್ಯಂತ ಸುಂದ
ರಿಯಾದ ಈ ಬಾಲಿಕೆಯು ವಿದ್ಯಾರ್ಜನೆ ಪಡೆಯುತ್ತಿರುವ ಕಾಲವೇ
ಮುಂದೆ ಸಾಗಿ ನಾಗಿದಂತೆ ಅವಳ ತಿಳುವಳಿಕೆಯು ಪ್ರವರ್ಧಿಸಿತು, ಚೆಲು
ವಿಕೆಯು ಅಚ್ಚುಕಟ್ಟಾಯಿತು. ಸಹಪಾಠಿ ವಿದ್ಯಾರ್ಥಿಗಳು ದೊರಕಿಸಿದ
ವಿದ್ಯೆಗಿಂತ ಕಡಿಮೆಯಲ್ಲದ ವಿದ್ಯೆಯು ಪ್ರಾಪ್ತವಾಯಿತು. ಒಟ್ಟಿನ ಮೇಲೆ
ತಂದೆಯ ಬಯಕೆಯಂತೆ ಹಾಗೂ ಗುರುದೇವನ ನಿರೀಕ್ಷಣೆಯಂತೆ ಆಕೆ ಸಕಲ
ವಿದ್ಯೆಯನ್ನು ಬಲ್ಲವಳಾದಳು.

ಗುರುದೇವನ ಶಿಷ್ಯ ಪ್ರಮುಖರಲ್ಲೆಲ್ಲ ಗೌತಮರೆಂಬ ಋಷಿಪುತ್ರರು
ಮಿಗಿಲಾಗಿದ್ದರು ಆತನಲ್ಲಿಯ ಚುರುಕು ಬುದ್ಧಿಯೂ, ಚೆಲುವಿಕೆಯೂ,
ಸೇವಾ ಧರ್ಮವೂ. ಶಾಂತ ಹಾಗು ಸುಸ್ವಭಾವವೂ ಗುರುದೇವನ ಉಳಿದ
ಶಿಷ್ಯರಿಂದ ಅವನನ್ನು ವಿಂಗಡಿಸಿ ತೋರಿಸುವಂತಾಗಿದ್ದಿತು. ಬಹು ದಿನದ
ವಿದ್ಯಾವ್ಯಾಸಂಗದಿಂದ ಅವನಲ್ಲಿಯ ತೇಜಸ್ಸು ವಿಶಿಷ್ಟವಾಗಿ ತೋರಹತ್ತಿತು.
ಅವನ ವಿದ್ಯಾರ್ಥಿದೆಸೆಯ ವಯೋಮರ್ಯಾದೆಯು ಮೀರಿತೆಂಬುದನ್ನು ಅವನಿ
ಗೊಡೆದ ಮುಖ ಭಾವಗಳು ತೋರಿಸುತ್ತಿದ್ದವು. ಆಶ್ರಮದಲ್ಲಿ ಅವನು ತೋರ್ಪ
ತ್ತಿರುವ ದೈಹಿಕ ಶ್ರಮವು ಇನ್ನೂ ಮತ್ತಿಷ್ಟು ವಿದ್ಯೆ ಸಂಪಾದನೆ ಮಾಡಿ
ಕೊಳ್ಳುವ ಅವನ ಲಾಲಸೆಯ ಪ್ರಾಬಲ್ಯವೂ ವರ್ಧಿಸುತ್ತಲೇ ಇರುತ್ತಿದ್ದಿತು.

ಇಂತು ಗುರುದೇವನ ಪರಮ ಪವಿತ್ರವಾದ ಆಶ್ರಮದ ತೋರಿಕೆಯ ಸ್ಥಿತಿಯಿದ್ದಿತು. ಪ್ರಭಾವಶಾಲಿಯಾದ ಋಷಿಯಾನುಗ್ರಹದಿಂದ ಆಶ್ರಮದ ಪ್ರದೇಶದಲ್ಲಿಯ ಪ್ರಾಣಿಗಳ ಅಂತರ್ಯಾಮದಲ್ಲೆಲ್ಲ ಶಾಂತಿ, ದಯೆ, ನಿರ್ವಿಕಾರತೆಗಳು ತುಂಬಿ ಹೊರ ಸೂಸುತ್ತಿದ್ದವು. ಅಲ್ಲಿಯ ನಿಶ್ಶೇಷ್ಟಿತವಾದ ಗಿಡ-ಮರಗಳೆಲ್ಲವೂ ಕಾಲ-ಋತುಗಳ ಬಂಧನವಿಲ್ಲದೆ ಮಳೆ-ಮೋಡ, ಚಳಿ-ಬಿಸಿಲುಗಳ ಅವಶ್ಯಕತೆಯಿಲ್ಲದೆ ಸದಾವಕಾಲವೂ ಹಣ್ಣು-ಹೂ-ಕಾಯಿ-ಫಲಗಳಿಂದ ಭರಿತವಾಗಿರುತ್ತಿದ್ದವು. ಆಶ್ರಮ ಭಾಗದಲ್ಲಿಯ ಜಲಾಶಯಗಳೂ ಜಲದೇವತೆಯ ಕೃಪೆಯಿಂದ ಭರಿತವಾಗಿ ಆ ಪುಣ್ಯಸ್ಥಾನದ ಸೇವೆಮಾಡುವ ಬುದ್ಧಿಯಿಂದ ತುಂಬಿ ಸೂಸುತ್ತಿರುವವು. ಈ ಪ್ರಕಾರದ ವೈಶಿಷ್ಟ್ಯತೆಯಿಂದ ಕೂಡಿದ ಸೊಬಗಾದ ಆ ಋಷ್ಯಾಶ್ರಮವು ಭೂಲೋಕದ ಸ್ವರ್ಗ ಕ್ಷೇತ್ರವೋ ಎನ್ನಿಸುವಂತೆ ಪರಿಶೋಭಿಸುತ್ತಿತ್ತು. ಇವೆಲ್ಲ ಉತ್ಕೃಷ್ಟತೆಗೆ ನಮ್ಮ ಗುರುದೇವ ಋಷಿವರ್ಯರ ಮಹಿಮೆಯೂ ಕಾರಣವಾಗಿತ್ತಲ್ಲದೆ ಆ ಕಾಮರೂಪ ಮಹಾರಾಜನ ಆಶ್ರಮದ ವಿಷಯದಲ್ಲಿಯ ಪೂಜ್ಯತೆಯೂ ಧರ್ಮದಲ್ಲಿ ತೋರಿಸುವ ಬುದ್ಧಿಯೂ, ಪ್ರಾಚೀನ ಪರಂಪರೆಯನ್ನು ಕಾಯ್ದುಕೊಂಡು ಹೋಗುವಲ್ಲಿರುವ ಅವನ ದಕ್ಷತೆಯೂ ಬಹುಮಟ್ಟಿಗೆ ಸಹಾಯಕಾರಿಯಾಗಿದ್ದವು.

## ೩. ಉಪವರಳಾದ ಅಹಲ್ಯೆ

ಹಿಂದೆ ವರ್ಣಿಸಿದ ಗುರುದೇವನ ಆಶ್ರಮದಲ್ಲಿಯೇ ರಾಜನಂದಿನಿ ಅಹಲ್ಯೆಯು ಶಿಕ್ಷಣ ಪಡೆದಳು. ರಾಜಪುತ್ರರಿಗೆ ಅವಶ್ಯಕವಿರುವಷ್ಟಕ್ಕಿಂತ ಹೆಚ್ಚಾಗಿ ವಿದ್ಯೆ ಸಂಪಾದಿಸಿದಳು. ಆಕೆಯ ಸಹಪಾಟಿ ವಿದ್ಯಾರ್ಥಿನಿಯರೂ ವಿದ್ಯಾರ್ಥಿಗಳೂ ತಮ್ಮ ತಮ್ಮ ಶಿಕ್ಷಣ ಮುಕ್ತಾಯಗೊಳಿಸಿಕೊಂಡು ಗುರುದೇವನಿಂದ ಪ್ರಶಸ್ತಿ ಪತ್ರಿಕೆಯನ್ನು ಪಡೆದುಕೊಂಡು ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಗುರುದೇವನು ಅವರಲ್ಲಿ ಕೆಲವರಿಗೆ ಅವರವರ ಇಚ್ಛೆಗನುಸಾರವಾಗಿ ವೈವಾಹಿಕ ಸುಖ ಪಡೆದು ಜೀವಿಸುವದಕ್ಕೂ ಕೆವಲರಿಗೆ ಧರ್ಮ-ಶಿಕ್ಷಣ ಬೋಧಕರಾಗಿ ವರ್ತಿಸುವದಕ್ಕೂ ಇನ್ನು ಕೆಲವರು ರಾಜಪುತ್ರರಿದ್ದವರಿಗೆ ಯುವರಾಜರಾಗಲು ಇಲ್ಲವೆ ಅಧಿಕಾರ ದೊರೆತರೆ ಅದನ್ನು ಅನುಭವಿಸಲು

ಅನುಮತಿಯನ್ನು ನೀಡಿ ಅವರನ್ನು ಹರಸಿ ಕಳಿಸಿದನು. ಇನ್ನು ಕೊನೆಗೆ ಗುರು ದೇವನಿಂದ ನಿರೋಪ ಪಡೆದ ನಮ್ಮ ರಾಜನಂದಿನಿ ಅಹಲ್ಯಾದೇವಿಯನ್ನು ಆಕೆಯ ತಂದೆಯ ಕೈಗೆ ಒಪ್ಪಿಸಿ 'ರಾಜ! ಇದು ವರೆಗೆ ಶಿಕ್ಷಣ ಕೊಡುವ ಕರ್ತವ್ಯವನ್ನು ಕೈಕೊಂಡು ಈಕೆಗೆ ವಿದ್ಯಾಭ್ಯಾಸ ಮಾಡಿಸಿದೆನು. ಅರಸು ಮಕ್ಕಳಿಗೆ ಅವಶ್ಯವಿರುವ ವಿಷಯಗಳಲ್ಲೆಲ್ಲ ಇವಳಿಗೆ ಬೋಧೆಯಾಗಿದೆ. ಆಶ್ರಮದ ನೇಮಗಳಂತೆ ನಡೆದು ಸುಶಿಕ್ಷಿತಳಾದ ಈಕೆಯನ್ನು ಇನ್ನು ಮುಂದಿನ ನಿನ್ನ ಕರ್ತವ್ಯವನ್ನು ಎಚ್ಚರಿಸಿ ಎಸಗುವದಕ್ಕಾಗಿ ನಿನ್ನ ಕಡೆಗೆ ನೀಡುವೆವು. ಇಲ್ಲಿಗೆ ನಮ್ಮ ಕರ್ತವ್ಯ ಭಾರವು ಮುಗಿಯಿತು' ಎಂದು ಹೇಳಿ-ಅಹಲ್ಯೆ! ಇದು ವರೆಗೆ ಗುರುಪುತ್ರಿಯಾಗಿ ಜೀವಿಸಿದ ನೀನು ತಂದೆಯನ್ನಾಶ್ರಯಿಸಿ ರಾಜಪುತ್ರಿಯಾದರೂ ಪಡೆದ ಶಿಕ್ಷಣದಿಂದ ರಾಜಪುತ್ರನಂತೆ ನೀನು ಪಿತೃವಿನ ರಾಜ್ಯಕ್ಕೆ ಉತ್ತರಾಧಿಕಾರಿಯಾಗಿ ಯುವರಾಜ್ಯ ಪಟ್ಟ ಪಡೆ. ಸ್ತ್ರೀಯರಿಗೆ ಉಲ್ಲಂಘಿಸಲು ಬಾರದ ವೈವಾಹಿಕ ಜೀವನದಲ್ಲಿ ಮುನ್ನಡೆದು ನಿನ್ನ ತಂದೆಯನ್ನು ಸಂತೋಷಗೊಳಿಸು. ಹೆಚ್ಚಿಗೆ ಹೇಳುವದೇನು? ನಿನ್ನ ತಂಡೆಯು ವೃದ್ಧಾವಸ್ಥೆಯ ಮರ್ಯಾದೆಯ ಕೊನೆಗೆ ತಲುಪಿರುವರು. ಆದರಿಂದಲೇ ನೀನು ಆತನು ನೀಡುವ ರಾಜ್ಯವನ್ನು ಪಡೆದು ನಿನಗೆ ದೊರೆತ ಪತಿರಾಯನೊಡನೆ ಸುಖಿಯಾಗಿ ರಾಜ್ಯವಾಳು. ಹಾಗು ನಿನ್ನ ತಂದೆಯಿಂದ ನಿನಗೆ ದೊರಕಿದ ರಾಜ್ಯವನ್ನು ಭವಿಷತ್ಕಾಲದಲ್ಲಿ ನೀನು ನಿನ್ನ ಮಗಳ ಕೈಗೆ ನೀಡಿ ಜನ್ಮಸಾಫಲ್ಯವನ್ನು ಪಡೆ' ಎಂದು ಆಕೆಗೆ ಹೇಳಿ ರಾಜನನ್ನು ಕುರಿತು- ರಾಜ! ಇನ್ನು ನಿನ್ನ ಈ ರತ್ನವನ್ನು ನೀನೆ ಸ್ವೀಕರಿಸು. ತಾನು ಜನಿಸಿದ ಕಣಿಯನ್ನು ಮರೆತ ರತ್ನವಿದು. ನೀನು ಇದನ್ನು ಭದ್ರವಾಗಿ ರಕ್ಷಿಸಿದ ಕಾವಲುಗಾರನು ಮಾತ್ರ. ಇದರ ಕಾವಲುಗಾರನಾದ ನೀನು ಈ ರತ್ನವನ್ನುಪರೀಕ್ಷಕರ ಕಡೆಗೆ ಒಯ್ಯುವ ಅವಶ್ಯವಿಲ್ಲ. ಕೇವಲ ಈ ರತ್ನವನ್ನು ಹಾರದಲ್ಲಿಟ್ಟುಕೊಂಡು ಧರಿಸುವ ಯೋಗ್ಯ ಮಾನವನನ್ನು ಶೋಧಿಸಿ ಅವನಿಗೆಅರ್ಪಿಸಿಬಿಡು. ಇಷ್ಟಾದರೆ ನಿನ್ನ ಕರ್ತವ್ಯ ಮುಗಿಯಿತು' ಎಂದು ಗುರುದೇವನು ರಾಜನಿಗೆ ಹೇಳ ಹೇಳುತ್ತಿರುವಲ್ಲಿ ರಾಜನ ಕಣ್ಣುಗಳಿಂದ ಒಂದೆ ಸವನೆ ನೀರು ಒಸರಹತ್ತಿತು. ಆಗ ಗುರುದೇವನು ರಾಜ! ಇದೇನು? ನಿನ್ನ ಹೃದಯವಿದೆಷ್ಟು

ನ್ಯೂನವಿದೆ? ಹೆಮ್ಮಕ್ಕಳು ಎಂದಿದ್ದರೂ ಹೆರವರಷ್ಟೇ! ಆದರೂ ನೀನು ಈಕೆಯನ್ನು ನಿನ್ನ ಉತ್ತರಾಧಿಕಾರಿಯನ್ನಾಗಿ ಮಾಡಿಕೊಂಡು ಆ ದುಃಖವನ್ನು ಹಿಂದೊಗೆಯುವ ಯೋಜನೆ ಮಾಡಿರುವಿ. ನಿಜಕ್ಕೂ ಇವಳು ನಿನ್ನನ್ನು ರಕ್ಷಿಸುವ ಪುತ್ರನೆಂದೇ ತಿಳಿ. ಪುರುಷರಂತೆ ದಿಟ್ಟತನವೂ ಗಟ್ಟಿಗತನವೂ ಇವಳಲ್ಲಿ ನೆಲೆಯಾಗಿ ನಿಂತಿದೆ. ನೀನಾವದೊಂದಕ್ಕೂ ಯೋಚನೆಮಾಡದೆ ನಿನ್ನ ನಡೆದು ಬಂದ ವಿಚಾರವನ್ನು ಮುಂದೆ ಸಾಗಿಸು. ಹಾಗು ಅದರಂತೆ ಕೊನೆಗಾಣಿಸು. ಅಂದರೇನೇ ನಿನ್ನ ಜನ್ಮ ಸಾಫಲ್ಯ" ಎಂದು ಹೇಳಿದನು.

ರಾಜನು– 'ಗುರುದೇವ! ನಾನಂತೂ ಈ ನನ್ನ ಮಗಳ ವಿವಾಹ ಮಾಡದೆ ಗತ್ಯಂತರವಿಲ್ಲ. ಈಕೆಗೆ ತಕ್ಕ ವರನನ್ನು ಅಂದರೆ ಬೇರೆ ದೇಶದ ರಾಜಪುತ್ರನನ್ನು ಶೋಧ ಮಾಡಿ ಲಗ್ನ ಮಾಡುವದು, ಆತನ ಮನೆಗೆ ಕಳಿಸುವದು ಅಂದ ಮೇಲೆ ನನ್ನ ರಾಜ್ಯವೂ ನನ್ನ ರಾಜ ಮನೆತನವೂ ಶೂನ್ಯವಾದಂತಾಗುವದಲ್ಲ? ಇನ್ನು ಈ ಬಗೆಗೆ ನಾನೇನು ಮಾಡತಕ್ಕದ್ದು? ಇದೇ ತಿಳಿಯದಾಗಿದೆ. ಇನ್ನೂ ನಿಮಗೆ ಈಕೆಯ ಲಗ್ನದ ಸಂಬಂಧ ಹೇಳುವದಾದರೆ– ಇದು ವರೆಗೆ ಈಕೆಯನ್ನು ಸುಶಿಕ್ಷಿತಳನ್ನಾಗಿ ಮಾಡಲು ಶ್ರಮ ವಹಿಸಿದ ನೀವೇ ಈಕೆಯನ್ನು ಯೋಗ್ಯ ವರನಿಗೆ ನೀಡಿ ವಿವಾಹಿತಳನ್ನಾಗಿ ಮಾಡುವಂತೆ ಮಾಡಲಿಕ್ಕೆ ಬೇಕು. ನಾನು ಇವಳಿಗೆ ಜನ್ಮದಾತೃ ಪಿತೃವಾಗಿದ್ದರೂ ನೀವು ವಿದ್ಯಾ ದಾತೃಪಿತೃವಾಗಿರುವಿರಿ. ಈಕೆಯ ಕಲ್ಯಾಣದ ಬಗೆಗೆ ನನಗಿರುವ ಚಿಂತೆಗಿಂತಲೂ ನೀವು ಹೆಚ್ಚಾಗಿ ದಕ್ಷತೆ ವಹಿಸುವಲ್ಲಿ ತಪ್ಪೇನು? ಈಕೆಯ ಸಂಬಂಧದ ಈ ಪಿತೃ ಅಧಿಕಾರವನ್ನು ಇಂದಿನಿಂದಲೇ ನಿಮ್ಮ ಮೇಲೆ ಚೆಲ್ಲಿಕೊಟ್ಟಿರುವೆ. ಇನ್ನು ಮುಂದೆ ನಿಮ್ಮ ವಿಚಾರವೇ ನಮಗೆ ಯೋಗ್ಯ. ಅಹಲ್ಯೇ! ನಾನು ನಿನಗೆ ಜನ್ಮದಾತಾರನಾದ ಪಿತನು. ಈ ಗುರುದೇವನು ನಿನಗೆ ಬುದ್ಧಿದಾತಾರನಾದ ಪಿತನು. ಇನ್ನು ಅವರ ವಿಚಾರವನ್ನು ನೀನು ಅಲ್ಲಗಳೆಯದೆ ಅವರು ಏರಿಸಿದ ಶಿಖರವನ್ನಡರು, ನೂಕಿದ ತಗ್ಗಿನಲ್ಲಿ ಬೀಳು. ಬುದ್ಧಿವಂತಳಾದ ನಿನಗೆ ಇನ್ನೇನು ಹೆಚ್ಚಿಗೆ ಹೇಳುವದು? ಮಗಳೇ ಈ ಬಗೆಗೆ ನಿನ್ನ ವಿಚಾರವನ್ನೊಂದನ್ನು ಮಾತ್ರ ನಾನು ತಿಳಿಯಬೇಕಾದುದು ಯೋಗ್ಯ. ನಿನ್ನ ಹಡೆದಾಕೆಯಿದ್ದರೆ ಅವಳ ಮುಂದೆ ನಿನ್ನವಿಚಾರವನ್ನು ಉಸುರುತ್ತಿದ್ದಿ. ಅದು ನನಗೆ ನೇರವಾಗಿ ತಿಳಿದು ಮುಂದಿನ ಮಾರ್ಗವು ಸುಗಮವಾಗುತ್ತಿತ್ತು.

ಆದರೆ ಮಾಡುವದೇನು? ಎಂಬ ನುಡಿಯು ಕ್ತಿರುವಷ್ಟರಲ್ಲಿಯೇ ಸುಸಂಸ್ಕೃತಳಾದ ಆ ಅಹಲ್ಯೆಯು 'ತಾತ! ಆರ್ಯರಾದ ತಮ್ಮ ವಾಕ್ಯವೇ ನನಗೆ ಪ್ರಮಾಣವು ನನ್ನ ಮುಂದಿನ ಜೀವನವು ಅದೆಂತೋ ಸಾಗಲಿ; ಆ ಬಗೆಗೆ ನಾನೆಷ್ಟೂ ಚಿಂತಿಸ ಲಾರೆನು. ಮುಖ್ಯವಾಗಿ ತಮ್ಮ ಅಪೇಕ್ಷೆಗೆ ಭಂಗವುಂಟಾಗದಂತೆ, ತಮ್ಮ ಮುಂದಿನ ಆಯುಷ್ಕ್ರಮಣವು ಸುಗಮವಾಗುವಂತೆ ನೀವೂ ಗುರುದೇವರೂ ಒಮ್ಮತದಿಂದ ಯಾವದೊಂದು ನಿರ್ಣಯಕ್ಕೆ ಬರುವದು ನನಗೆ ಸಮ್ಮತವು. ನಿಮ್ಮೀರ್ವರ ಯಾವದೊಂದು ಶಬ್ದವನ್ನೂ ನಾನು ಮೀರುವಂತಿಲ್ಲ. ನಿಮ್ಮ ರಾಜ್ಯದಉತ್ತರಾಧಿಕಾರವು ನಿಮ್ಮ ಒಪ್ಪಿಗೆಯಿಂದ ನನಗೆ ದೊರೆತರೂ ನನ್ನನ್ನು ಪರಿಗ್ರಹಿಸಿದ ಪತಿರಾಯರು ಯಾರೇ ಆದರೂ ಅವರೇ ನನಗೂ, ಹಕ್ಕಿನಿಂದ ನನಗೆದೊರೆತ ರಾಜ್ಯಕ್ಕೂ ಒಡೆಯರಾಗಬಲ್ಲರು.ಇದನ್ನೂ ನಾನುಅಲ್ಲಗಳೆಯು ವಂತಿಲ್ಲ. ಹಾಗೆ ಮೀರುವದು ಯಾವ ಆರ್ಯ ಮಹಿಳೆಯರಿಗೂ ಭೂಷಣ ವಾಗುವದಿಲ್ಲ. ಅದಕ್ಕಾಗಿ ನಿಮ್ಮಿಂದ ನನಗೆ ದೊರೆತ ರಾಜ್ಯದ ಉಪಭೋಗ ವನ್ನು ಕೇವಲ ತನಗೆ ಅಪ್ರಾಪ್ಯವಾದುದು ದೊರಕಿತೆಂದು ಭಾವಿಸದೆ ಪ್ರಜಾ ವಾತ್ಸಲ್ಯಯುಕ್ತನಾಗಿ ಸದ್ಧರ್ಮದಿಂದ ನಡೆದು ನಿಮ್ಮ ಔದಾರ್ಯ–ಕೀರ್ತಿ ಗಳನ್ನು ಹೊಗಳಿಕೆಗೆ ಗುರಿಮಾಡುವ ಜಾಮಾತೃವನ್ನು ಶೋಧಿಸಿರಿ. ಅವನು ರಾಜಕೀಯದಲ್ಲಿ ಋಷಿಯೇ ಇರಲಿ, ಬಡವನೇ ಇರಲಿ, ಸಿರಿವಂತನೇ ಇರಲಿ ಅವನ ಸದ್ಗುಣಗಳನ್ನಷ್ಟೇ ಗ್ರಹಿಸುವೆನೇ ಹೊರತು ಅವನ ಇನ್ನಾವ ಬಗೆಯನ್ನೂ ಲಕ್ಷ್ಯಕ್ಕೆ ತಂದುಕೊಳ್ಳಲಾರೆನು. ಒಟ್ಟಿನಮೇಲೆ ತಮಗೆ ನನ್ನ ನಿರ್ಧಾರದ ಮಾತು ತಿಳಿಸುವದಾದರೆ ನೀವೂ ಗುರುದೇವರೂ ಅನ್ಯೋನ್ಯ ಅನುಮತಿಯಿಂದ ಶೋಧಿಸಿ ಗೊತ್ತುಪಡಿಸಿದವರೇ ನನ್ನ ಪತಿಯಾಗಲಿ. ಈ ವಿಷಯಕ್ಕೆ ಇನ್ನೊಂದು ವಿಚಾರವೇ ಬೇಡ. ಇದಕ್ಕೆ ಸ್ವಯಂವರ ಮುಂತಾದ ನನ್ನ ಸ್ವಾತಂತ್ರ್ಯದ ಯಾವ ಅಧಿಕಾರವೂ ಅಡ್ಡಬರಲಾರದು ಎಂದು ವಿದಿತಪಡಿಸಿದಳು.

ತಂದೆಯೂ ಗುರುದೇವನೂ ಅಹಲ್ಯೆಯ ವಿಚಾರಯುಕ್ತ ಮಾತುಗಳನ್ನು ಕೇಳಿ ಸಂತುಷ್ಟರಾದರು. ಪುನಃ ತನ್ನನ್ನು ಪ್ರಶ್ನೆಮಾಡುವ ಸಮಯವನ್ನಿಡದೆ ಆದ ನಿರ್ಧರಣೆಯ ಆಕೆಯ ನುಡಿಗಳಿಂದ ರಾಜನೂ ಗುರುದೇವನೂ –-ಪೂರ್ಣ ಎಚ್ಚತ್ತರು. ಇನ್ನುಮೇಲೆ ಪರಿಶ್ರಮಪೂರ್ವಕವಾಗಿ ವರಶೋಧನೆ

ಯನ್ನು ಮಾಡಿ ಅಹಲ್ಯೆಯ ವಿವಾಹ ಮಾಡುವದೊಂದೇ ವಿಚಾರ ಅವರಲ್ಲಿ ಉಂಟಾಯಿತು. ರಾಜನು ತನ್ನ ವಿಚಾರದಂತೆ ವರಶೋಧನೆಯನ್ನು ನಡೆಯಿಸಿದನು. ಮಂತ್ರಿ ಪುರೋಹಿತರನ್ನು ದಿಗ್ದೇಶಗಳಮೇಲೆ ಕಳಿಸಿದನು. ಅವರೆಲ್ಲರು ಆರ್ಯಾವರ್ತವನ್ನೆಲ್ಲ ಸುತ್ತಾಡಿ ಬಂದರು. ಸಂಗಡ ತಂದಿದ್ದ ನೂರಾರು ವರಗಳ ಟಿಪ್ಪಣಿಗಳನ್ನೂ ತಸಬೀರುಗಳನ್ನೂ ತಂದು ಕೊಟ್ಟರು. ಆದರೆ ರಾಜನಿಗೆ ಅವಾವ ವರಗಳೂ ಮನಸ್ಸಿಗೆ ಬರಲಿಲ್ಲ. ಸಾಮಾನ್ಯವಾಗಿ ಅರಸುಮನೆತನದ ವರಗಳಲ್ಲಿ ವಧುವಿನ ಅಧಿಕಾರದಿಂದ ದೊರೆತ ರಾಜ್ಯದಲ್ಲಿ ಬಂದು ನಿಂತು ಅಧಿಕಾರ ಹೊರುವ ಎದೆಗಾರರಾರೂ ದೊರೆಯಲಿಲ್ಲ. ಕೆಲ ವರಗಳು ಗೋತ್ರ-ಪ್ರವರಾದಿಗಳಲ್ಲಿ ವಧುವಿನ ಗೋತ್ರ-ಪ್ರವರಗಳಿಗೆ ಹೊಂದಿಕೆಯಾಗಲಿಲ್ಲ. ಕೆಲ ವರಗಳ ನಾಡೀಕೂಟಗಳೂ ಭಿನ್ನವಾಗಲಿಲ್ಲ. ಬಹುಶಃ ಎಲ್ಲ ವರಗಳು ಮಗಳ ಚೆಲುವಿಕೆಗೆ ಸರಿಹೊಂದುವ ರೂಪವುಳ್ಳವಾಗಿರಲಿಲ್ಲ. ಒಟ್ಟಿನಮೇಲೆ ಸರ್ವಾಂಶದಿಂದ ಸಮ್ಮತಿ ಹೊಂದುವ ವರನೇ ದೊರೆಯಲಿಲ್ಲ. ಇನ್ನೂ ಹೆಚ್ಚು ವಿಚಾರಕ್ಕೂ ಶೋಧನೆಗೂ ಅವಕಾಶವಿಲ್ಲದ್ದರಿಂದ ಆತನು ವರಗಳ ಬಗ್ಗೆ ನಿರಾಶನಾದನು. ಕಡೆಗೆ ಆತನು ಗುರುದೇವನ ಅನುಮತಿಯನ್ನು ಪಡೆದು ಋಷ್ಯಾಶ್ರಮದಲ್ಲಿಯ ಋಷಿಕುಮಾರನೋರ್ವನಿಗೆ ಧಾರೆಯೆರೆದು ಕೊಟ್ಟುಬಿಡುವ ನಿರ್ಧಾರ ಮಾಡಿಕೊಂಡು ಗುರುದೇವನಲ್ಲಿಗೆ ತೆರಳಿದನು.

## ೪. ವರ ಶೋಧ

ಹಿಂದಿನ ಅಧ್ಯಾಯದಲ್ಲಿ ಹೇಳಿದಂತೆ ರಾಜನು ಅಹಲ್ಯೆಗೆ ರಿಸಹೋಲುವ ವರನನ್ನು ಶೋಧಿಸಿ ಸಾಧಿಸದ್ದಕ್ಕೆ ಬೇಸತ್ತು ಬೇಜಾರಾದನು. ಕೊನೆಗೆ ಆತನು ತನ್ನಮಗಳನ್ನು ಆಶ್ರಮದ ಋಷಿಕುಮಾರನಿಗೆಕೊಟ್ಟು ಜನ್ಮಸಾರ್ಥಕ ಮಾಡಿಕೊಳ್ಳುವ ಹಿರಿಯಾಸೆಯುಳ್ಳವನಾಗಿ ಮರು ದಿನವೇ ಗುರುದೇವನ ಆಶ್ರಮಕ್ಕೆ ಬಂದನು.

ರಾಜನು ಆಶ್ರಮಕ್ಕೆ ಬಂದಕೂಡಲೆ ಋಷಿಕುಮಾರರು ಗುರುದೇವನ ಬಳಿಗೆ ಹೋಗಿ ರಾಜನು ಆಗಮಿಸಿದ ಸಂಗತಿಯನ್ನು ನಿವೇದಿಸಿದರು.

ಸದ್ಧರ್ಮರಕ್ಷಕ ಪ್ರಭುವು ಅನಿರೀಕ್ಷಿತವಾಗಿ ಆಶ್ರಮಕ್ಕೆ ಬಂದುದನ್ನು ಕಂಡು, ಗುರುದೇವನು ಆತನನ್ನು ಎದುರುಹೋಗಿ ಸತ್ಕರಿಸಿದನು. ರಾಜ

ಗುರುದೇವನಿಗೆ ವಂದಿಸಿದ ಬಳಿಕ ಕುಶಲ ಪ್ರಶ್ನೆಗಳನ್ನಾಡುತ್ತ ಈರ್ವರೂ ಋಷ್ಯಾಶ್ರಮದ ಅನುಷ್ಠಾನ ಮಂದಿರದೊಳಕ್ಕೆ ಹೋಗಿ ಕುಳಿತರು. ಆಗ ಗುರುದೇವನು— ರಾಜ! ಅಹಲ್ಯೆಯು ಕುಶಲವಷ್ಟೆ? ವ್ಯಾಸಂಗ ಮುಗಿಯಿಸಿ ಕೊಂಡು ಹೋದ ನಂತರ ಇದುವರೆಗೆ ಆಕೆಯ ದರ್ಶನವಿಲ್ಲದ್ದರಿಂದ ನಮಗೂ ಆಶ್ರಮವಾಸಿಗಳಿಗೂ ಉತ್ಸಾಹವಿಲ್ಲದಾಗಿದೆ. ತಾಯಿ – ತಂದೆಗಳಿಗೆ ತಾವು ಸಾಕಿ ಸಲಹಿದ ಹೆಣ್ಣುಮಕ್ಕಳು ಹೇಗೆ ಪರಕೀಯರಾಗುವರೋ ಅದೇ ಸ್ಥಿತಿಯೇ ನಮ್ಮಿಂದ ಅಗಲಿದ ಅಹಲ್ಯೆಯು ನಮಗೆ ಪರಕೀಯಳಾದಂತೆ ಭಾಸವಾಗುವದು. ಏನೇ ಆಗಲಿ ಇನ್ನುಮೇಲೆ ನಮಗೆ ಅವಳ ಭೆಟ್ಟಿಯು ಅವಳ ವಿವಾಹ ಸಮಾರಂಭದಲ್ಲೇ ಎಂದು ಕಾಣುವದು. ಒಳ್ಳೇದು ಇದಿರಲಿ ರಾಜ! ಈಗ ಅನಪೇಕ್ಷಿತವಾದ ನಿಮ್ಮ ಆಗಮನವು ನನಗೆ ಕುತೂಹಲದಾಯಕ ವಾಗಿದೆ. ಸದಾ ಚೈತನ್ಯ ಮುಖಚರ್ಯೆಯಿಂದ ಇರುವ ನೀವು ಇಂದು ಅದೇಕೆ ಖಿನ್ನರಾಗಿರುವಿರಿ, ಎಲ್ಲವೂ ಒಳಿತು ಅಲ್ಲವೆ! ಎಂದು ಗುರುದೇವನು ನುಡಿದನು.

ಗುರುದೇವನಾಡಿದ ವಾತ್ಸಲ್ಯದ ನುಡಿಗಳಿಂದ ಸಂತುಷ್ಟತೆ ಪಡೆದ ರಾಜನು– ಸ್ವಾಮಿನ್! ಅದಾವ ಪ್ರಸಂಗವೂ ಇಲ್ಲ. ನನಗೆ ಒಂದೇ ಒಂದು ಅಂದರೆ ಅಹಲ್ಯೆಯ ವಿವಾಹದ ಚಿಂತೆಯೇ. ಅದೂ ಸಹ ತಮ್ಮ ಸಹಾಯ– ಸಹಾನುಭೂತಿಯಿಂದ ಅದೆಷ್ಟೋ ಕಡಿಮೆಯಾಗಿದೆ. ಮೊನ್ನೆ ನಮ್ಮ–ನಿಮ್ಮ ವಿಚಾರದಲ್ಲಿ ನಡೆದಂತೆ ವರ ಶೋಧನೆಯ ನಿಮಿತ್ತಕಂದ ಪುರೋಹಿತರನ್ನು ಸುತ್ತೆಲ್ಲ ಕಳಿಸಿದ್ದೆನು. ಅವರು ಅದೆಷ್ಟೋ ದೇಶ ಸಂಚರಿಸಿ ವರಟಿಪ್ಪಣಿಗಳನ್ನೂ ತಸಬೀರುಗಳನ್ನೂ ತಂದಿರುವರು. ಇವಾವವೂ ನಮ್ಮ ಅಹಲ್ಯೆಯ ಜಾತಕಕ್ಕೂ ಚೆಲುವಿಕೆಗೂ ನನ್ನ ಮುಂದಿನ ಹವಣಿಕೆಗೂ ಸರಿಗೂಡದಂತಾಗಿವೆ. ಆಕೆಗೆ ಗುರುಬಲವು ಚೆನ್ನಾಗಿದ್ದರೂ ಅದೇಕೋ ಲಗ್ನದ ಯೋಗಾಯೋಗ ಬರವಲ್ಲ ದಲ್ಲ? ನಾನಂತೂ ಈ ವಿಷಯದಲ್ಲಿ ಅತಿ ಬೇಸತ್ತು ಬೆಂಡಾಗಿ ಇದೀಗ ನಿಮ್ಮ ಕಡೆಗೆ ಬಂದಿರುವೆ. ಇನ್ನು ಮೇಲೆ ಆದಷ್ಟು ತೀವ್ರ ಆಕೆಯ ಲಗ್ನ ಮಾಡಿಯೇ ಬಿಡುವೆ. ಇನ್ನು ವರ ಶೋಧನೆಗೆ ದಿನಗಳೆಯುವದು ಬೇಡ. ನಮ್ಮನ್ನು ಸರಿಗಟ್ಟುವ ಅರಸರೂ, ಶೂರರೂ, ಸಿರಿವಂತರೂ ಬೇಡ. ಕೇವಲ ತಮ್ಮಿಂದ ಶಿಕ್ಷಣಹೊಂದಿದ, ಆಕೆಯ ಶಿಕ್ಷಣಕ್ಕೆ ತಕ್ಕ ಶಿಕ್ಷಣ ಪಡೆದ ಹಾಗೂ ಆಕೆಯ ಚೆಲುವಿಕೆಗೂ, ವಯಸ್ಸಿಗೂ ತಕ್ಕ ಋಷಿಪುತ್ರನೊಬ್ಬನ ಗೋತ್ರ ಪ್ರವರಾದಿ

ಗಳೆನ್ನು ನಿರೀಕ್ಷಿಸಿ ಗೊತ್ತುಮಾಡಿಬಿಡುವದುಯುಕ್ತವು. ಇದರಿಂದಮುಖ್ಯವಾಗಿ ಕನ್ಯಾದಾನ ಮಾಡಿದ ಮಹತ್ಪುಣ್ಯವು ಅಪರ ವಯಸ್ಸಿನವನಾದ ನನ್ನ ಪದರಿನಲ್ಲಿ ಬೀಳುವದು ಹಾಗು ನಿಷ್ಕಂಟಕವಾಗಿದ್ದ ನನ್ನ ರಾಜ್ಯ ಸಿರಿಯು ನಮ್ಮ ಅಹಲ್ಯೆಯ ಅರ್ಥಾತ್ ಆಕೆಯನ್ನು ಪರಿಗ್ರಹಿಸಿದ ದೈವವಂತನ ಪದರಿನಲ್ಲಿ ಬೀಳುವದು. ಈ ವಿಚಾರವನ್ನು ತಮ್ಮ ಮುಂದಿಟ್ಟು ಮುಂದಿನ ಕಾರ್ಯಕ್ಕನುಕೂಲ ಮಾಡಿಕೊಳ್ಳುವ ಕುರಿತು ಬಂದಿರುವೆ. ಇನ್ನು ಮೇಲೆ ಶ್ರೀ ಗುರುದೇವನ ಇಚ್ಛೆ ಎಂದು ನುಡಿದು ಸುಮ್ಮನಾದನು.

ಅಹಲ್ಯೆಯ ಲಗ್ನದ ಸಂಬಂಧವಾಗಿ ರಾಜನ ನಿಶ್ಚಿತ ವಾಕ್ಯ ಕೇಳಿ ಗುರುದೇವನು ರಾಜನಿಗೆ "ರಾಜ! ಉಂಟು! ನೀನು ಬಯಸುವಂತೆ ಅಹಲ್ಯೆಗೆ ಸಿರಿವಂತಿಕೆಯೊಂದರ ಹೊರತು ಎಲ್ಲದರಲ್ಲಿಯೂ ಮಿಕ್ಕಿದ ಋಷಿಕುಮಾರ ಗೌತಮನೆಂಬ ಶಿಷ್ಯನು ಉಂಟು. ಸಿರಿಯಿಲ್ಲವೆಂದರೇನು? ಋಷಿಗಳಾದ ನಮಗೆ ತಪಸ್ಸೇ ಸಿರಿಯು! ಋಷಿಗಳು ನಾರು ಬಟ್ಟೆಯಿಂದ ತುಷ್ಟರಾದರೆ; ನೀವು ವಲ್ಕಲಾದಿಗಳಿಂದತುಷ್ಟರಾಗುವಿರಿ. ಅಂದಮೇಲೆ ಈಎಲ್ಲತಾರತಮ್ಯಗಳನ್ನು ನೀವೂ ಅಹಲ್ಯೆಯೂ ಇನ್ನೂ ಒಂದು ಬಾರಿ ಆಪ್ತಾಲೋಚನೆ ಮಾಡಿ ಯಾವ ದೊಂದು ನಿರ್ಧಾರಕ್ಕೆ ಬಂದುಬಿಡಿರಿ. ಗೌತಮನ ಶಿಕ್ಷಣವೂ ಮುಗಿದಿದೆ. ನಮ್ಮ ಶಿಷ್ಯರಲ್ಲೆಲ್ಲ ಆತನು ರತ್ನದಂತಿರುವನು. ಗೃಹಸ್ಥಾಶ್ರಮಿಯಾಗುವ ಕುರಿತು ಆತನಿಗೆ ತಿಳಿಸಿದೆ. ನಮ್ಮ ಹೇಳಿಕೆ ನಿಮಗೆ ಒಪ್ಪಿತವಾದರೆ, ಅಹಲ್ಯೆಯು ಗೌತಮನನ್ನು ಪ್ರೀತಿಸುವದಾದರೆ ನಿಮ್ಮ ಇಚ್ಛೆಯಂತೆ ಆಗಲಿ" ಎಂದನು.

ಆಗ ರಾಜನು– ಗುರುದೇವ! ಗೌತಮನ ವಿಷಯವಾಗಿ ನೀವು ಹೇಳಿದ ಸಂಗತಿಗಳೆಲ್ಲವು ನನಗೆ ವಿಶ್ವಾಸವನ್ನು ಹುಟ್ಟಿಸುವವು. ಅಹಲ್ಯೆಯ ವಿವಾಹದ ಬಗೆಗೆ ನನಗೆಷ್ಟು ಆತುರವೋ ಅದಕ್ಕಿಂತಲೂ ಹೆಚ್ಚು ಆತುರತೆ ನಿಮ್ಮಲ್ಲಿರ ಬೇಕಾಗಿದೆ; ಹಾಗು ಅದರಂತೆ ಇದೆ ಎಂದ ಮೇಲೆ ಇನ್ನ್ಯಾವದಕ್ಕೂ ಯಾವ ವಿಚಾರಕ್ಕೂ ಅವಕಾಶ ಬೇಕಾಗಿಲ್ಲ ಹಾಗು ಆಸ್ಪದ ಬೇಕಾಗಿಲ್ಲ. ನಿಮ್ಮಿಂದ "ಇದೇ ಮುಹೂರ್ತ, ಎಲ್ಲವೂ ಸಿದ್ಧತೆಯಾಗಲಿ! ಇವೆರಡು ಅಪ್ಪಣೆಗಳಿಗಾಗಿ ಕಾದಿರುವೆನು, ಕೃಪೆ ಮಾಡಬೇಕು" ಎಂದು ಗುರುದೇವನಿಗೆ ಕೈ ಮುಗಿದು ನಿಂತನು.

ಆಗ ಗುರುದೇವನು ರಾಜನನ್ನು ಕುರಿತು–ರಾಜ! ಇದೇ ನಿನ್ನ ನಿರ್ಧಾರ ವಾದರೆ ಒಳಿತು. ನಾನು ಕೂಡಲೆ ಹೋಗಿ ಗೌತಮನಿಗೆ ಈ ಸಂಗತಿಯನ್ನು ತಿಳಿಸಿ ಅವನನ್ನೂ ಲಗ್ನಕ್ಕಾಗಿ ಸಿದ್ಧನಾಗಲು ತಿಳಿಸುವೆನು. ನೀನು ಈಗಲೇ ಅರಮನೆಗೆ ಹೋಗು. ಗೌತಮನ ವಿಷಯವಾಗಿ ಅಹಲ್ಯೆಯನ್ನು ವಿಚಾರಿಸು. ಅವನ ವಿದ್ವತ್ತ್ರಭಾವಾದಿಗಳೆಲ್ಲ ಆಕೆಗೆ ಗೊತ್ತು. ಆಕೆಯೂ ಆತನನ್ನು ವರಿಸಲು ನಿಶ್ಚಯವಾಗಿ ಒಪ್ಪುವಳು. ಸಂಶಯಬೇಡ. ಇನ್ನು ಮುಂದೆ ಲಗ್ನದ ಸಿದ್ಧತೆ ಕೈಕೊಳ್ಳು' ಎಂದು ಹೇಳಲು ರಾಜನು ಹಾಗೇ ಆಗಲಿ ಎಂದು ಗುರುಗಳಿಗೆ ವಂದಿಸಿ ರಾಜಧಾನಿಗೆ ಹೊರಟುಹೋದನು.

## ೫. ಗೌತಮ ಋಷಿ

ರಾಜನು ತೆರಳಿದ ನಂತರ ಗುರುದೇವನು ತನ್ನ ಆಶ್ರಮದ ನಿತ್ಯಕರ್ಮಾದಿ ಗಳನ್ನೆಲ್ಲ ಮುಗಿಯಿಸಿಕೊಂಡು ಗೌತಮನ ಆಶ್ರಮದ ಕಡೆಗೆ ನಡೆದನು. ಆತನ ಆ ಆಶ್ರಮವು ಬ್ರಹ್ಮಾರಣ್ಯದ ಒಂದು ಚಿಕ್ಕ ಪ್ರವಾಹದ ದಂಡೆಯ ಮೇಲೆ ಸಣ್ಣ ಕುಟೀರವಾಗಿದ್ದಿತು. ಗುರುದೇವನು ಆ ಕುಟೀರದ ಒಳ ಸೇರಿ– 'ತಮ್ಮಾ! ಗೌತಮಾ! ಎಂದು ಸಂಬೋಧಿಸಿದನು. ಧ್ಯಾನಮಗ್ನ ನಾಗಿದ್ದ ಗೌತಮನು ಗುರುವಿನ ಕೂಗಿನಿಂದ ತಟ್ಟನೆ ಎದ್ದು ಬಂದು ಗುರುಪಾದಗಳಿಗೆ ವಂದಿಸಿದನು. ಘೋರ ತಪಸ್ಸಿನಿಂದ ಆತನ ಶರೀರವು ಬಡವಾಗಿದ್ದಿತು. ಕಣ್ಣುಗಳು ಒಳಸೇರಿದ್ದವು. ಮೈಬಣ್ಣವು ಕಂದಿ ಕುಂದಿ ಕಾಂತಿಯು ನಿಸ್ತೇಜವಾಗಿದ್ದಿತು. ಇಂಥ ಸ್ವರೂಪದ ಆ ಗೌತಮನನ್ನು ಕುರಿತು ಗುರುದೇವನು–ಗೌತಮಾ! ಕ್ಷೇಮವೇ! ಇದೇನು ವ್ಯಾಸಂಗ ನಡೆಯಿ ಸಿರುವೆ! ಎಂದು ಕೇಳಲು ಗೌತಮನು 'ಸ್ವಾಮಿ ತಮ್ಮ ಕೃಪೆಯಿಂದ ಕುಶ ಲವು. ಈಗ ನಾನು ನ್ಯಾಯಶಾಸ್ತ್ರವನ್ನು ಬರೆಯುಹತ್ತಿರುವೆ' ಎಂದನು. ಗುರುದೇವನು– 'ತಮ್ಮಾ! ನೀನು ದೊರಕಿಸಿದ ವಿದ್ಯೆಗೆ ತಕ್ಕ ಕಾರ್ಯ ಕೈ ಕೊಂಡಿರುವಿ. ಈ ಶಾಸ್ತ್ರದಿಂದ ನೀನು ಕೀರ್ತಿವಂತನಾಗುವಿ, ಅಮರನಾಗುವಿ. ಈಗ ನಾನು ನಿನಗೆ ತಿಳಿಸುವದೇನಂದರೆ ನೀನು ಈ ಶಾಸ್ತ್ರ ಬರೆಯುವದಾದ ಬಳಿಕ ಗೃಹಸ್ಥಾಶ್ರಮಿಯಾಗು. ನಿನಗಾಗಿ ಯೋಗ್ಯ ಕನ್ಯೆಯೊಂದನ್ನು ಗೊತ್ತುಪಡಿಸಿರುವೆ. ಆ ಗ್ರಹಿಣಿಯು ನಿನ್ನನ್ನು ಯಾವಾಗಲೂ ಅನುಸರಿಸು

ವಳು. ನಿನ್ನ ನಿತ್ಯ ತಪಸ್ಸಿನ ಕಾರ್ಯಗಳಿಗೆ ಅನುಕೂಲಳಾಗಿ ವರ್ತಿಸುವಳು. ನಿನ್ನ ಎಲ್ಲ ಕಾರ್ಯಗಳಿಗೆ ಆಕೆ ಸಹಾಯಕಳಾಗಿ ವರ್ತಿಸಬೇಕಾದವಳೆಂದಮೇಲೆ ಅಕಸ್ಮಾತ್ತಾಗಿ ಆಕೆಗೆ ಬಂದುಬಿದ್ದ ಭಾರವನ್ನೂ ನೀನು ಸಹಿಸಿಕೊಂಡು ಹೋಗಬೇಕಾಗುವದು. ಇದು ಸಕಲ ನೀತಿ ಶಾಸ್ತ್ರ ಬಲ್ಲವನಿಗೆ ಕಠಿಣವಲ್ಲ. ಇದೇ ನಾನು ನಿನಗೆ ವಿಧಿಸುವ ಕಟ್ಟಪ್ಪಣೆ. ನಿನ್ನ ವಿವಾಹ ಸಮಾರಂಭಕ್ಕೆ ಆಶ್ರಮವಾಸಿಗಳೆಲ್ಲರೂ ಆತುರರಾಗಿರುವರು. ತೀವ್ರವೇ ನಿನ್ನನ್ನು ಕರೆ ಕಳುಹಿದಕೂಡಲೇ ನಮ್ಮ ಆಶ್ರಮಕ್ಕೆ ಬಂದುಬಿಡು. ಎಂದು ಹೇಳಿ ಗುರು ದೇವನು ಅಲ್ಲಿಂದ ಹೊರಟು ಆಶ್ರಮಕ್ಕೆ ಬಂದನು.

ಗೌತಮನಿಗೆ ಈಗ ಒಳ್ಳೇ ದಿಗಿಲು, ಯಾವಾಗಲೂ ಅವನಿಗೆ ಗುರು ವಾಕ್ಯವೇ ಪ್ರಮಾಣವು. ಹಾಗು ಗುರುದೇವನ ಮಾತಿನಲ್ಲಿ ವಿಶ್ವಾಸ. ಅದ್ದರಿಂದಲೇ ಆತನು ತನ್ನ ಲಗ್ನದ ಬಗೆಗೆ ಏನೊಂದನ್ನೂ ವಿಚಾರಿಸದೆ ಗುರುದೇವನ ಮಾತಿಗೆ ಮೌನತ್ವದಿಂದ ಸಮ್ಮತಿಯನ್ನು ಕೊಟ್ಟು ಅವರು ಹೊರಟಕೂಡಲೇ ಅವರ ಪಾದಗಳಿಗೆ ವಂದಿಸಿ ಬೀಳ್ಕೊಟ್ಟನು.

## ೬. ಲಗ್ನನಿಶ್ಚಯ

ಗುರುಕುಲದಿಂದ ರಾಜನು ತಿರುಗಿ ಬಂದ ಕೂಡಲೆ ಆತನು ತನ್ನ ಮಂತ್ರಿಪುರೋಹಿತರನ್ನು ಕರೆಯಿಸಿಕೊಂಡು ಅಹಲ್ಯೆಯವಿವಾಹದ ಮುಂದಿನ ವಿಚಾರವನ್ನು ಮಾಡಹತ್ತಿದನು. ಗುರುದೇವನು ತನಗೆ ವರವನ್ನು ಗೊತ್ತು ಮಾಡಿ ಕೊಟ್ಟ ಬಗ್ಗೆ ಅವರೆದುರು ಗುರುದೇವನ ಅನಂತ ಉಪಕಾರಗಳನ್ನು ನೆನೆಯಿಸಿದನು. ಹಾಗು ತೀವ್ರವೇ ವಿವಾಹಕ್ಕೆ ಅವಶ್ಯವಿರುವ ಸಾಹಿತ್ಯ ಗಳನ್ನೆಲ್ಲ ಸಿದ್ಧಪಡಿಸುವದೆಂದು ಆಜ್ಞಾಪಿಸಿದನು.

ರಾಜನು, ಇಂತು ಮಂತ್ರಿ ಪುರೋಹಿತರಿಗೆ ತಿಳಿಸಲು ಅವರು ರಾಜನ್ ವರನ ಕುಲ, ಗೋತ್ರ, ಶಿಕ್ಷಣಗಳೇನು? ಎಂದು ಜಿಜ್ಞಾಸು ಭಾವದಿಂದ ಕೇಳಿ ದರು. ಗುರುದೇವನಿಂದ ತಿಳಿದ ಎಲ್ಲ ಸಂಗತಿಯನ್ನು ಅವನು ಅವರಿಗೆ ಹೇಳಿದನು. ಇಷ್ಟೇ ಅಲ್ಲ ವರನ ಸಂಬಂಧವಾಗಿ ಬಹುಕಾಲ ಅವನ ಸಹ ಪಾಠಿಯಾಗಿದ್ದ ಅಹಲ್ಯೆಗೆ ಗೊತ್ತಿರುವದು. ವಿಚಾರಿಸೋಣವೆಂದು ರಾಜನು ಮಗಳನ್ನು ಕುರಿತು- ಅಹಲ್ಯೆ; ನಿನ್ನನ್ನು ನಿನ್ನ ಗುರುದೇವನ ಪ್ರಮುಖ ಶಿಷ್ಯ

ನಾದ ಗೌತಮುನಿಗೆ ಧಾರೆಯೆರೆದು ಕೊಡಲು ನಿಶ್ಚಯ ಮಾಡಿರುವೆವು. ಆತನ ಸಂಬಂಧವಾಗಿ ಅಂದರೆ, ಆತನ ವಿದ್ಯೆ, ಸ್ವಭಾವ ಮುಂತಾದವುಗಳ ಬಗೆಗೆ ನಿನಗೇ ಹೆಚ್ಚು ತಿಳಿದಿರಬಹುದು. ಯಾಕಂದರೆ, ನೀವು ಒಬ್ಬ ಗುರುವಿನ ಬಳಿಯಲ್ಲಿ ಒಂದೇ ಬಗೆಯ ಶಿಕ್ಷಣ ಪಡೆದು ಗುರುದೇವನ ಕೃಪೆಗೆ ಪಾತ್ರರಾಗಿ ರುವಿರೆಂದ ಮೇಲೆ ನಿನ್ನ ಹಿತಕ್ಕಾಗಿಯೇ ನಿನ್ನನ್ನು ಕೇಳಬೇಕಾಯಿತು. ಈ ಬಗ್ಗೆ ನಿನ್ನ ವಿಚಾರವೇನು? ಎಂದು ಪ್ರೀತಿಯಿಂದ ಕೇಳಿದನು ಅಹಲ್ಯೆಯು ತಂದೆಯ ಕೇಳಿಕೆಗೆ ತುಸು ಲಜ್ಜೆಯಿಂದ ತನ್ನ ಹೇಳಿಕೆಯನ್ನು ವ್ಯಕ್ತಪಡಿಸಿ ಒಳಕ್ಕೆ ಹೋದಳು. ಮಂತ್ರಿಯೂ ಕುಲಪುರೋಹಿತನೂ ರಾಜನ ಮುಖದಿಂದ ಹೊರಡುವ ಗೌತಮನ ವೃತ್ತಕೇಳಲು ಆತುರರಾಗಿ ಕುಳಿತರು. ಆಗ ಅವನು– ನಾನು ಈ ಮೊದಲೇ ಗುರುದೇವನ ಸನ್ನಿಧಿಗೆ ಹೋಗಿ ಎಲ್ಲವನ್ನೂ ತಿಳಿದು ಬಂದೆ ಈಗನೀವು ಉತ್ಸುಕತೆಯಿಂದಇನ್ನೂ ನನ್ನ ಮನಸ್ಸಿನಲ್ಲಿಯ ಗೌತಮನ ಸಂಬಂಧದ ವೈಯಕ್ತಿಕ ಸಂಗತಿಗಳನ್ನು ಕೇಳುವಿರೆಂದ ಮೇಲೆ ಅದನ್ನು ಹೇಳು ತ್ತೇನೆ ಕೇಳಿರಿ. ಅಹಲ್ಯೆಯು ಗುರುಕುಲದಲ್ಲಿ ವಿದ್ಯಾಭ್ಯಾಸಮಾಡಿದ ಹಲವು ಸಹಪಾಠಿಗಳಲ್ಲಿ ನಾನು ಹೇಳುವ ಗೌತಮನು ಒಬ್ಬನಾದರೂ ಆತನು ಆಕಾಶದ ಹಲವು ತಾರೆಗಳಲ್ಲಿ ಪ್ರಕಾಶಿಸುವ ಚಂದ್ರನೋಪಾದಿಯಲ್ಲಿ ಇರು ವನು. ಅವನುಶ್ರೇಷ್ಠ ತಪಸ್ವಿಯುಹಾಗು ಜ್ಞಾನಿಯು. ಜಿತೇಂದ್ರಿಯನೂ, ಸುಂದ ರನೂ, ಸುಶೀಲನೂ, ವಿದ್ವಾಂಸನೂ ಇವೆಲ್ಲ ಗುಣಗಳಿಂದ ವಿಶಿಷ್ಟನಾದ ಆತನು ಗುರುದೇವನ ಪಟ್ಟಶಿಷ್ಯನಾಗಿ ಬಿಟ್ಟಿರುವನು. ಆ ವಿನಯಶೀಲ ಗೌತಮನು ಶಾಸ್ತ್ರಜ್ಞಾನದಲ್ಲಿ ಅಗಾಧಪಾಂಡಿತ್ಯವುಳ್ಳವನು ಹಾಗು ಅಪರಾಜಿತನು. ಇಂತು ಆಶ್ರಮವಾಸಿಗಳೆಲ್ಲರಿಂದ ಸ್ತುತಿಗೆ ಪಾತ್ರನಾದ ಆ ಗೌತಮನ ಗುಣಗಳನ್ನು ನಾನು ತಿಳಿದಂತೆ ನಿಮಗೆ ಹೇಳಿದೆನು. ಇನ್ನು ಅವನಲ್ಲಿಯ ದೋಷವೆಂದರೆ ಒಂದೇ ಒಂದು. ಅದಾವದೆಂದರೆ, ಈ ನಶ್ವರ ಸಂಪತ್ತಿನ ಅಭಾವವು. ಇದಕ್ಕೂ ಹೆಚ್ಚಿಗೆ ಹೇಳುವದೇನು? ತಪಸ್ಸೇ ಧನವಾಗಿರುವ ಆತನು ಕುಬೇರನ ಸಂಪ ತ್ತನ್ನೂ ಇಂದ್ರನವೈಭವವನ್ನೂ ಕಡೆಗಣಿಸುವಷ್ಟು ಮಹತ್ವದಪುರುಷನಾಗಿರು ವನು. ಗುಣದಿಂದಲೂ ಚೆಲುವಿಕೆಯಿಂದಲೂ ಅವನನ್ನು ಸೋಲಿಸುವವರಾರೂ ಇಲ್ಲವೆಂದು ಹೇಳಬಹುದು. ಆದರೂ ಗುರುದೇವನು ಕಾರುಣ್ಯ ಭಾವದಿಂದ ಎಲ್ಲರನ್ನೂ ನಿರೀಕ್ಷಿಸಿ ಆ ಗೌತಮನನ್ನು ವರನನ್ನಾಗಿ ದೊರಕಿಸಿ ಕೊಟ್ಟಿರುವ

ಕಿಂದ ಮೇಲೆ ನಾವು ಆತನ ಉಪಕಾರವನ್ನು ಚಿರಕಾಲ ಸ್ಮರಿಸಬೇಕು ಎಂದು ಗೌತಮನ ಗುಣ ವರ್ಣನೆ ಮಾಡಿ ರಾಜನು ಸುಮ್ಮನಾದನು.

ಮಂತ್ರಿ–ಪುರೋಹಿತರು ರಾಜನ ಹೇಳಿಕೆಗಳನ್ನೆಲ್ಲ ಸಂತೋಷಪೂರ್ವಕವಾಗಿ ಕೇಳಿ ಧನ್ಯತೆಯನ್ನವನಿಗೆ ಅರ್ಪಿಸಿದರು. ಹಾಗು ಅಹಲ್ಯೆಯ ವಿವಾಹದ ಸಿದ್ಧತೆಯನ್ನು ಮಾಡುವದಕ್ಕೆ ಮುಂದಾಗಿ ಆತನಿಗೆ ತಿಳಿಸಿದರು.

## ೭. ಲಗ್ನ ಸಮಾರಂಭ

ಇಂದು ರಾಜಮಂದಿರದಲ್ಲಿ ಸಡಗರವೇ ಸಡಗರ. ರಾಜನಂದಿನಿ ಅಹಲ್ಯೆಯ ಲಗ್ನ ಸಮಾರಂಭದ ದೇವತಾಕಾರ್ಯ. ಮುನ್ನಾ ದಿನದಲ್ಲಿ ರಾಜನು ಗುರುದೇವನ ಕಡೆಗೆ ಪತ್ರವನ್ನು ಬರೆದು ಪುರೋಹಿತನನ್ನು 'ನಾನು ಋಷಿಕುಮಾರ ಗೌತಮರಾಜನಿಗೆ ನನ್ನ ಪ್ರೇಮದ ಪುತ್ರಿಯಂತಿದ್ದ ಅಹಲ್ಯೆಯನ್ನು ಧಾರೆಯೆರೆದು ಕನ್ಯಾದಾನವಾಗಿ ನೀಡುವೆನು. ವರ ಪಕ್ಷದವರಾದ ತಾವೂ ಆಶ್ರಮವಾಸಿಗಳೆಲ್ಲರೂ ವರನೊಡನೆ ಬಂದು ನಾವು ಮಾಡುವ ಆದರಾತಿಥ್ಯವನ್ನು ಸ್ವೀಕರಿಸುವದಾಗಬೇಕು' ಎಂದು ಲಗ್ನದೋಲೆಯನ್ನು ಕಳಿಸಿ ಕರೆಯಿಸಿದ್ದನು. ಅದರಂತೆ ಸುರಲೋಕದ ದೇವತೆಗಳಿಗೂ ಸಮಸ್ತ ಋಷಿಬ್ರಹ್ಮವೃಂದಕ್ಕೂ ಆಮಂತ್ರಣ ಕಳಿಸಿ ಅವರನ್ನೆಲ್ಲ ಬರಮಾಡಿಕೊಂಡಿದ್ದನು. ರಾಜಧಾನಿಯೆಲ್ಲ ಬಂದ ಬೀಗರಿಂದಲೂ ಅತಿಥಿ ಅಭ್ಯಾಗತರಿಂದಲೂ ಅಮರರಾದ ದೇವತೆಗಳಿಂದಲೂ ತುಂಬಿ ತುಳುಕುತ್ತಿದ್ದಿತು.

ಲಗ್ನದ ನಿಶ್ಚಿತ ವೇಳೆಗೆ ಸರಿಯಾಗಿ ಅಹಲ್ಯಾ ಗೌತಮರ ವಿವಾಹವು ವಿಧಿಯುಕ್ತವಾಗಿ ಜರುಗಿತು. ಲಗ್ನಕ್ಕಾಗಿ ಬಂದವರಿಗೆಲ್ಲರಿಗೂ ರಾಜನು ತನ್ನ ರಾಜರೀತಿಗನುಸರಿಸಿ ಉಪಚರಿಸಿದನು. ನೆರೆದಿದ್ದ ಬ್ರಹ್ಮವೃಂದವನ್ನೂ ಇತರ ವರ್ಗವನ್ನೂ ಸಮೃದ್ಧಿಯಾದ ದಕ್ಷಿಣೆಯಿಂದ ಸಂತುಷ್ಟ ಪಡಿಸಿದನು. ಮದುಮಗನು ವಲ್ಕಲಾ ವಸ್ತ್ರಗಳಿಂದಲೂ ರುದ್ರಾಕ್ಷಿ ಮಾಲೆಗಳಿಂದಲೂ ಸುಶೋಭಿತನಾಗಿದ್ದನೆಂದು ಬೇರೆ ಹೇಳುವ ಕಾರಣವಿಲ್ಲ. ಆತನ ಪಾಣಿಗ್ರಹಣ ಮಾಡಿದ ಅಹಲ್ಯೆಯು ತನ್ನ ತಂದೆಯಿಂದ ವಿವಾಹಭೂಷಣಾರ್ಥ ಕೊಡಲ್ಪಟ್ಟ ದಿವ್ಯಾಲಂಕಾರಗಳನ್ನೂ ಪೀತಾಂಬರ ಮೊದಲಾದವುಗಳನ್ನೂ ಇವನ್ನೆಲ್ಲತೊರೆದು ಪತಿಯನ್ನನುಸರಿಸಿಗೌತಮನಿಂದ ಭೂಷಣಾರ್ಥವಾಗಿ ಕೊಡ

ಲ್ಪಟ್ಟ ನಾರು ಬಟ್ಟೆಗಳನ್ನು ಧರಿಸಿದಳು. ಪತಿಯಿಂದ ದೊರೆತ ಹಲವಾರು ಪುಷ್ಪಜಾತಿಗಳ ಮಾಲೆಯನ್ನು ಧರಿಸಿಕೊಂಡಳೇ ಹೊರತು ತಂದೆಯಿಂದ ನೀಡಲ್ಪಟ್ಟ ರತ್ನಹಾರಾದಿಗಳನ್ನು ಬಿಟ್ಟುಬಿಟ್ಟಳು. ಸ್ವಾಭಾವಿಕ ಚೆಲುವೆಯಾದ ಅಹಲ್ಯೆಗೆ ಸ್ವಾಭಾವಿಕ ಉಡಿಗೆತೊಡಿಗೆಗಳು ಅಂದ ಮೇಲೆ ಕೇಳುವದೇನು! ಕಂಡವರೆಲ್ಲ ಈಕೆ ಮೂಲೋಕದಲ್ಲಿ ಮಿಗಿಲಾದ ಸುಂದರಿಯು ಎಂದು ಆಡದೆ ಬಿಡಲಿಲ್ಲ.

ಲಗ್ನ ಸಮಾರಂಭವು ಮುಕ್ತಾಯವಾದ ನಂತರ ಎಲ್ಲರೂ ತಮ್ಮ ತಮ್ಮ ಸ್ಥಳಗಳಿಗೆ ತೆರಳಿದರು. ದೇವ ಋಷಿಗಳೆಲ್ಲ ತೆರಳಿದರು. ಮದುಮಗಳಾದ ಅಹಲ್ಯೆಯು ತನ್ನ ಪತಿಯನ್ನು ಬೆಂಬಳಿಸಿ ಬ್ರಹ್ಮಾರಣ್ಯದಲ್ಲಿದ್ದ ಅವನ ಸಣ್ಣ ಕುಟೀರಕ್ಕೆ ಬಂದಳು.

## ೮. ಪತಿಯೊಡನೆ ಅಹಲ್ಯೆಯು

ವಿವಾಹದ ನಂತರ ಅಹಲ್ಯೆಯು ತಂದೆಯಿಂದ ಅಂತರಿಸಿ ಹೋಗಿ ನಾಲ್ಕೈದು ದಿನಗಳಾದವು, ಹತ್ತೆಂಟು ದಿನಗಳಾದವು, ವಾರಕ್ಕೆ ವಾರಗಳು ತಿರುಗಿದವು, ಕೆಲ ಮಾಸಗಳೂ ಗತಿಸಿದವು. ಆದರೆ ರಾಜನ ಪೂರ್ವ ಬಯಕೆಯಂತೆ ಅಳಿಯನೂ ಮಗಳೂ ತನ್ನ ಸಂಪತ್ತಿನ ಉಪಭೋಗಕ್ಕಾಗಿ ತನ್ನಲ್ಲಿ ಬಂದು ಇರಲಿಲ್ಲ. ತನ್ನ ತರುವಾಯದ ಉತ್ತರಾಧಿಕಾರಿಗಳಾಗಿ ಅಳಿಯನೂ ಮಗಳೂ ಬಂದು ರಾಜ್ಯ ಸ್ವೀಕರಿಸಲಿಲ್ಲ. ಮಂತ್ರಿ ಪುರೋಹಿತರನ್ನೂ ಆ ಬಗೆಗೆ ಅವರೆಡೆಗೆ ಕಳಿಸಿಕೊಟ್ಟನು. ಆದರೆ– ಆದರೇನು? ರಾಜ ಸುತೆಯು ಈಗ ಋಷಿರಾಜನ ಸತಿಯು. ಗೌತಮನು ಋಷಿರಾಜನೇ ಹೊರತು ಕಾಮರೂಪ ರಾಜ್ಯದ ರಾಜನಲ್ಲ. ಈ ಅನುಭವಗಳನ್ನು ಹೊಂದಿ ಅವರು ತಾವು ಬಂದ ಮಾರ್ಗದಿಂದ ಹಿಂದೆಗೆದು ಹೋದರು. ಅಹಲ್ಯೆಯು ನಿತ್ಯವೂ ಆಶ್ರಮದ ನೇಮಗಳನ್ನು ತಾನೇ ಅಣಿಯಾಗಿ ಸಾಗಿಸಹತ್ತಿದಳು. ಪತಿಯ ಅನುಷ್ಠಾನಾದಿಗಳಿಗೆ ತಕ್ಕಅನುಕೂಲತೆಕಲ್ಪಿಸಿಕೊಡುವಳು. ಬಿಡುವಿನ ವೇಳೆಯಲ್ಲಿ ತನ್ನ ಪತಿಯು ಬರೆದಿರುವ ಶಾಸ್ತ್ರಗಳನ್ನು ಓದಿ ಮನಸ್ಸು ಶುದ್ಧೀಕರಿಸಿಕೊಳ್ಳುವಳು. ಯಾವಾಗಲೂ ಪತಿಸೇವೆಯೇ ಆಕೆಯ ಮುಖ್ಯಕರ್ತವ್ಯವಾಗಿಬಿಟ್ಟಿತು. ಕುಟೀರವನ್ನು ಸಮ್ಮಾರ್ಜಿಸುವದೂ ಪೂಜೆಯ ಉಪಕರಣಗಳನ್ನು

ತನುವುಗೊಳಿಸವುದೂ ಅತಿಥಿಗಳನ್ನು ಪರಾಮರ್ಶಿಸುವುದೂ ಇವೆಲ್ಲ ಒಂದೂ ಉಳಿಯದೆ ಕಾರ್ಯಗಳಲ್ಲಿ ಆಕೆ ತತ್ಪರಳಾಗಿ ಆಶ್ರಮವೇ ತನ್ನದು, ಪತಿಯೇ ತನ್ನವನು, ತಾನೇ ತನ್ನವಳು ಎಂಬ ವಿಚಾರದಲ್ಲಿ ತನ್ಮಯಳಾಗಿ ಕಾಲ ಕಳೆಯುಹತ್ತಿದಳು. ಆಕೆ ಸದ್ಗುಣ–ಸದಾಚರಣೆಗಳ ಆದರ್ಶಮೂರ್ತಿಯಾಗಿ ಎಲ್ಲರಿಂದಲೂ ಕೀರ್ತಿಪಡೆಯಹತ್ತಿದಳು.

ಇಂತು ಆ ಸತಿಯು ತನ್ನ ಪತಿಯನ್ನು ಅನುಸರಿಸಿ ನಡೆಯಿಸಿದ ಸಂಸಾರದಿಂದ ಆ ದಂಪತಿಗಳೀರ್ವರಿಗೂ ಸ್ವರ್ಗ ಸುಖಕ್ಕಿಂತಲೂ ಮಿಗಿಲಾದ ಸುಖವು ಇಲ್ಲಿಯು ಹೊರತು ಬೇರೆಲ್ಲಿಯೂ ಇಲ್ಲ ಎಂಬುದು ನಿಶ್ಚಿತವಾಗಿ ಬಿಟ್ಟಿತು

## ೯. ಇಂದ್ರನ ವಿಕಾರ

ಇಂತು ಋಷ್ಯಾಶ್ರಮದಲ್ಲಿ ಅಹಲ್ಯಾ ಗೌತಮರ ಸೊಗಸಿನ ಸಂಸಾರ. ಮಗಳಿಂದ ದೂರಾಗಿ ಕಳವಳಗೊಂಡ ಆಕೆಯ ತಂದೆಗೆ ತನ್ನ ರಾಜ್ಯಭಾರವೂ ಸಂಸಾರವೂ ಅಸಾರ. ಇವೆರಡೂ ಸ್ಥಿತಿಯಲ್ಲದೆ ಇನ್ನೊತ್ತಟ್ಟಿಗೆ ಒಂದು ಕುಹಕ ವಿಚಾರ. ಅದೇನೆಂದರೆ–ಅಹಲ್ಯೆಯು ಲೋಕವಿಖ್ಯಾತಳಾದ ಸುಂದರಿ ಯೆಂದು ದೇವ ಮಾನವರಿಗೆಲ್ಲ ತಿಳಿದ ಮಾತಾಗಿದ್ದಿತು. ಆಕೆಯ ವಿವಾಹ ಸಮಾರಂಭಕ್ಕೆ ಬಂದ ಅದೆಷ್ಟೋ ದೇವತೆಗಳು ಆಕೆಯ ಚೆಲುವಿಕೆಯನ್ನು ಕಂಡು ಅಸೂಯೆ ಪಟ್ಟರು. ಇಷ್ಟೇ ಅಲ್ಲ ಅವರು ತಮ್ಮ ಅಧಿಪತಿ ಇಂದ್ರ ನೆದುರು–'ಜೀಯಾ! ಈ ಸುರಸಭೆಯಲ್ಲಿಯ ಸುಂದರಿಯರನ್ನು ಹಿಂದೊಗೆ ಯುವ ಚೆಲುವೆ ಭೂಲೋಕದಲ್ಲಿ ಕೀರ್ತಿಹೊಂದುತ್ತಿರುವಳು. ಆಕೆ ಬಡ ತಪಸ್ವಿ ಗೌತಮನನ್ನು ವರಿಸಿ ಸುಖದಿಂದ ಸಂಸಾರ ಸಾಗಿಸುತ್ತಿರುವಳು. ಬ್ರಹ್ಮನು ಆಕೆಗೆ ಚೆಲುವಿಕೆಯನ್ನಿತ್ತು ಅಪಾತ್ರದಾನ ಮಾಡಿದಂತಾಗಿದೆ. ಸುರಪ! ಇಷ್ಟೇ ಅಲ್ಲ. ಆಕೆಯ ಪತಿಯು ಭೂಲೋಕದ ತಪಸ್ವಿಗಳಲ್ಲೆಲ್ಲ ಮಿಗಿಲಾದವನು. ಆತನಿಗೆ ತನ್ನ ಧರ್ಮಪತ್ನಿಯ ತಕ್ಕ ನೆರವು ಕೂಡಿದ್ದ ರಿಂದ ಅವನ ತಪಶ್ಚರ್ಯಕ್ಕೆ ಇನ್ನೂ ಹೆಚ್ಚು ಕಳೆಯೇರುತ್ತಿದೆ. ಇನ್ನೂ ಅನತಿ ಕಾಲದಲ್ಲಿ ಆತನು ತನ್ನ ತಪಸ್ಸಾಮರ್ಥ್ಯದಿಂದ ನಿನ್ನ ಪದವಿಯನ್ನು ಸಹ ಗೆಲ್ಲುವನೆಂಬದರಲ್ಲಿ ಸಂದೇಹವಿಲ್ಲ. ಸಂಶಯವಿಲ್ಲ' ಎಂದು ಹೇಳಿದರು.

ಇಂದ್ರನಿಗೀಗ ದೀರ್ಘವಿಚಾರ. ಶತಯಾಗ ಮಾಡಿ ಕಷ್ಟದಿಂದ ಸಂಪ್ರಾಪ್ತ ಮಾಡಿಕೊಂಡಿದ್ದ ಈ ನನ್ನ ಸಿಂಹಾಸನವು ಆ ಬಡತಪಸ್ವಿಯಿಂದ ಅಪಹೃತವಾಗಬಹುದೇ! ಇದ್ದರೂ ಇರಬಹುದು. ಆತನ ತಪೋಭಂಗವನ್ನು ಆ ಮೊದಲೇ ನಾನು ಮಾಡಿಬಿಟ್ಟದ್ದಾದರೆ ನನ್ನ ಪದವಿ ಸುರಕ್ಷಿತವುಳಿಯು ವದು. ಇದಕ್ಕೊಂದೇ ಮಾರ್ಗವು. ಆತನಿಗೆ ಅನುಕೂಲೆಯಾಗಿ ವರ್ತಿಸುವ ಅವನ ಸತಿಯಿಂದ ಅವನನ್ನು ಹೀನದೆಸೆಗೆಳೆಯಲು ಬರುವದು. ಅದಕ್ಕಾಗಿ ಆ ಅಹಲ್ಯೆಯ ಮಾನಕ್ಕೆ ಕುಂದುಂಟಾಗುವಂತೆ ವರ್ತಿಸುವದೇ ನನಗೆ ತಕ್ಕ ಮಾರ್ಗ. ಇದರಿಂದ ನನಗೆ ದುಷ್ಕೀರ್ತಿಯೊದಗಿದರೂ ಅಡ್ಡಿಯಿಲ್ಲ. ಅದನ್ನು ಸಹಿಸುವೆನು. ಆದರೆ ನನ್ನ ಇಂದ್ರ ಪದವಿಯು ಹೋಗುವಂತಾದರೆ ಮಾತ್ರ ತಡೆಯಲಾರೆನು; ಎಂದು ತನ್ನಲ್ಲಿ ವಿಚಾರಿಸಿದನು. ಹಾಗು ತಾನು ಭೂಲೋಕಕ್ಕೆ ಹೋಗಿ ಅಹಲ್ಯೆಯ ಮಾನಭಂಗಮಾಡುವ ಎಣಿಕೆ ಹಾಕಹತ್ತಿದನು.

## ೧೦. ಇಂದ್ರನ ದುಷ್ಕ್ರಿಯೆ

ಬಳಿಕೊಂದು ವರ್ಷ ಕಾಲದ ದುರ್ದಿನ. ಮೋಡಗಳು ಆಕಾಶದಲ್ಲಿ ಏರುತ್ತಾ ಬಂದು ಖಸ್ಥ ಗ್ರಹಗಳನ್ನು ನಾಶಮಾಡಹತ್ತಿವೆ. ಭೂಲೋಕದ ಮಾನವರೆಲ್ಲ ಗುಡುಗುಟ್ಟುವ ಮೋಡಗಳ ಆರ್ಭಟಿಗೆ ಅಂಜಿ ಮನೆಗಳಿಂದ ಹೊರಬೀಳದ ಸ್ಥಿತಿಯುಂಟಾಗಿದೆ. ಇಂಥದರಲ್ಲಿಯೂ ಗೌತಮ ಋಷಿಯು ತನ್ನ ನಿತ್ಯಾಹ್ನಿಕ–ಅನುಷ್ಠಾನಗಳಿಗೆ ಬಿಡುವು ಕೊಡದೆ ತನ್ನ ಕೌಪೀನದಿಂದ ಅಂತರಿಸಿ ನದೀತೀರಕ್ಕೆ ಹೋಗಿರುವನು. ಭಗವಾನ್ ಸೂರ್ಯನಾರಾಯಣನನ್ನು ಮರೆಮಾಡಿದ ಮೋಡಗಳು ಇದೀಗ ಚದರುವವು, ಇನ್ನಲ್ಪ ಕಾಲದಲ್ಲಿ ಬಯಲಾಗುವವು ಎಂಬ ಭರವಸೆಯಿಂದ ಬೊಗಸೆಯಲ್ಲಿ ಅರ್ಘ್ಯ ಜಲವನ್ನು ತೆಗೆದುಕೊಂಡು ರವಿಯು ಪ್ರಕಾಶಿತನಾಗುವ ಸಮಯವನ್ನು ಕಾಯ್ದುಕೊಂಡು ನದಿಯಲ್ಲಿ ನಿಂತಿರುವನು. ಆತನ ಧರ್ಮಪತ್ನಿ ಅಹಲ್ಯೆಯು ಆಶ್ರಮದ ಕೆಲಸ ಬೊಗಸೆಗಳನ್ನೆಲ್ಲ ತೀರಿಸಿಕೊಂಡು ಪತಿಯ ಮಾರ್ಗ ನಿರೀಕ್ಷಿಸುತ್ತ ಆಶ್ರಮ ದ್ವಾರದಲ್ಲಿ ಕಾದು ಕುಳಿತಿರುವಳು. ಮುನಿವಟುಗಳೆಲ್ಲ ಸಮಿತ್ ಸೌದೆಗಳಿಗಾಗಿ ವನದಲ್ಲಿ ಸೇರಿಹೋಗಿರುವರು. ಈ ಎಲ್ಲ ಅನುಕೂಲ ಸಮಯ ನಿರೀಕ್ಷಿಸಿಕೊಂಡು ಇಂದ್ರನು ಸುರಲೋಕದಿಂದ ತನ್ನ ದಿವ್ಯಸೊಬಗಿನ ವೇಷದಿಂದ ಬಂದು ಗೌತಮನ ಆಶ್ರಮ ದ್ವಾರದಲ್ಲಿ ಇಳಿದನು.

ಇಂದ್ರನ ದಿವ್ಯಸಡಗರವನ್ನು ಕಂಡು ಅಹಲ್ಯೆಯು ಭಯಚಕಿತಳಾದಳು. ಯಾರೂ ಇಲ್ಲದ ಸಮಯದಲ್ಲಿ ದ್ವಾರಕ್ಕೆ ಬಂದ ಪರ ಪುರುಷನನ್ನು ಕಂಡು ಒಳ ಸೇರಿದಳು. ಇವನು ಇಂದ್ರನೋ, ಚಂದ್ರನೋ ಇದಾವುದನ್ನೂ ಆಕೆ ಅರಿಯದೆ ಸ್ತ್ರೀ ಮರ್ಯಾದೆಗನುಸರಿಸಿ ಅಲ್ಲಿಂದ ಸಾವರಿಸಿಕೊಂಡು ಆಶ್ರಮದೊಳಕ್ಕೆ ಸೇರಿದಳು. ಹಾಗು ಆಕೆಯಲ್ಲಿ ಆಗ ಆ ಪುರುಷನ ದಿವ್ಯಸಂಪತ್ತೇಜವನ್ನು ಕಂಡು ತನ್ನ ಪತಿಯು ಇವನೇ ಆಗಿದ್ದರೆ? ಎಂಬ ದೋಷಯುಕ್ತ ವಿಚಾರವು ಸುಳಿದು ಆ ಕೂಡಲೆ ಮಾಯವಾಗುವದರಲ್ಲಿದ್ದಿತು.

ಅಷ್ಟರಲ್ಲಿಯೇ ಆ ವಿಕಾರಯುಕ್ತನಾದ ಇಂದ್ರನು ನಿರ್ಭಯನಾಗಿ ಆಶ್ರಮದೊಳಕ್ಕೇ ಸೇರಿದನು. ಅಹಲ್ಯೆಯನ್ನು ಬಲವಂತಿಕೆಯಿಂದ ಹಿಡಿದನು. ರಾಕ್ಷಸರಿಗುಚಿತವಾದ ಕೃತಿಯನ್ನು ಪೂರ್ಣಮಾಡಿಕೊಂಡು ಕೂಡಲೆ ಅಲ್ಲಿಂದ ತೆರಳಿದನು.

ಪಾಪ! ಅಬಲೆಯಾದ ಅಹಲ್ಯೆಯು ಈಗ ದಿಕ್ಕುಗಾಣದೆ ಗತಪ್ರಾಣಳಾಗಿ ಬಿದ್ದುಬಿಟ್ಟಳು.

## ೧೧. ಗೌತಮನ ಶಾಪಗಳು

ಕೊನೆಗೊಮ್ಮೆ ದಿನಕರನು ಮೋಡಗಳ ತೆರೆ ತೆರೆಗಳೊಳಗಿಂದ ಇಣಿಕಿ ತನ್ನ ಕಿರಣಗಳನ್ನು ಚೆಲ್ಲಿದನು ನದೀತೀರದಲ್ಲಿ ಅರ್ಘ್ಯ ಪ್ರದಾನಕ್ಕಾಗಿ ಕಾದು ನಿಂತಿದ್ದ ಋಷಿವರ್ಯ ಗೌತಮನು ಪ್ರಾತರ್ಮಧ್ಯಾಹ್ನದೆರಡೂ ಸಂಧಿಗಳಲ್ಲಿ ನೀಡತಕ್ಕ ಅರ್ಘ್ಯಜಲವನ್ನು ರವಿರಾಯನಿಗೆ ನೀಡಿ ಶೇಷಾನುಷ್ಠಾನಗಳನ್ನು ಮುಗಿಯಿಸಿಕೊಂಡು ತನ್ನ ಕುಟೀರಕ್ಕೆ ಬಂದನು. ಬಂದು ನೋಡಲಾಗಿ ಪವಿತ್ರವೆನಿಸುತ್ತಿದ್ದ ಕುಟೀರವು ಅದೆಂತೋ ಕನ್ನವಿಕ್ಕಿದ ಮನೆಯಂತೆ ಹಾಳು ಸುರಿಯುತ್ತಿದೆ. ಆಶ್ರಮದೊಳಗೆ ಅಸ್ಯವ್ಯಸ್ತವಾಗಿ ಬಿದ್ದಿದ್ದ ಅಹಲ್ಯೆಯನ್ನು ಕಂಡು ಕೆಂಡದಂತಾದನು. ಅದಾರಮೇಲೆ? ಆತನು ತನ್ನ ಅಂತರ್ದೃಷ್ಟಿಯಿಂದ ಕಂಡ ಪುರಂಧರನಮೇಲೆ. ಆ ಕೂಡಲೇ ತಾನು ಮನೋವೇಗದಿಂದ ಆ ಸುರಪತಿಯ ಸಭೆಗೆ ಬಂದನು. ರಂಭೆ-ಊರ್ವಸಿ-ತಿಲೋತ್ತಮೆಯರನ್ನೆಲ್ಲ ಇಂದ್ರನು ತನ್ನೆದುರಿನಲ್ಲಿರಿಸಿಕೊಂಡು ಅವರ ಚೆಲುವಿಕೆಯನ್ನು ಭೂಲೋಕದಲ್ಲಿಯ ಅಹಲ್ಯೆಯ ಚೆಲುವಿಕೆಗೆ ಎದುರಿಟ್ಟು-ಸುರಾಂಗನೆಯರೇ

ಇದೇನು ನಿಮ್ಮ ಚೆಲುವಿಕೆಯು? ಆ ಅಹಲ್ಯೆಯ ಸೌಂದರ್ಯದ ಪಾಸಾಂಗಕ್ಕೆ ಸಹ ಬಾರದು. ನಿಮ್ಮಿಂದ ಸಹಸ್ರ ಗುಣಿತವಾಗಿ ಸುಂದರಳಾಗಿರುವ ಆ ಗೌತ ಮನ ಪತ್ನಿ ಅಹಲ್ಯೆ–ಇಷ್ಟೆನ್ನುವಷ್ಟರಲ್ಲಿಯೇ ಗೌತಮನು ಆತನ ಎದುರು ಹೋಗಿ–ಛೀ ಮೂರ್ಖಾ, ನೀಚಾ, ದುರಾತ್ಮಾ ನಿನಗೆ ಈ ಹೆಂಗಳೆಯ ರೆದುರು ನಿನ್ನ ಹೇಸಿತನವನ್ನು ಮಾಚಿಕೊಂಡು ಮಾತಾಡಲು ಲಜ್ಜೆಯಾಗುವ ದಿಲ್ಲವೋ ! ಪರಸ್ತ್ರೀಯಳ ಮೇಲೆ ಬಲಾತ್ಕಾರ ಮಾಡಿದೆನೆಂದು ಜಂಭ ಕೊಚ್ಚಿಕೊಳ್ಳಲು ನಿನಗೆ ನಾಚಿಕೆಯಿಲ್ಲವೋ ! ನಾನು ಸಹಸ್ರ ಕಿರಣನಿಗೆ ಅರ್ಘ್ಯ ನೀಡಲು ಹೋದಾಗ ನೀನು ನಮ್ಮ ಆಶ್ರಮ ದೊಳಕ್ಕೆ ಹೊಕ್ಕು ಹೇಸಿನಾಹಸ ಕೃತ್ಯವನ್ನೆಸಗಿ ಅಕ್ಷಮ್ಯ ಅಪರಾಧ ಮಾಡಿ ಇಲ್ಲಿ ನಿನ್ನ ಅಧ್ಯಕ್ಷತೆಯನ್ನು ಮೆರೆಯಿಸುವಿ, ಸುರರೊಡೆಯನೆಂದು ಮೆರೆಯುವ ನೀನು ಅಸುರರುಕೂಡ ಭಯದಿಂದ ಅಸಹ್ಯ ಪಡುವ ನಿಂದ್ಯ ಕರ್ಮ ಮಾಡಲು ನಿನಗೆ ಅದು ಹೇಗೆ ಮನಸ್ಸಾಯಿತು. ಮೂರ್ಖಾ! ನಿನ್ನ ದುಷ್ಕೃತಿಯ ಫಲವಾಗಿ ನಾನು ನಿನಗೀಗ ಎಂದೂ ಹಿಂದಾಗದ ಶಾಪ ಕೊಡುವೆ; ಸ್ವೀಕರಿಸು–ಆ ಸಹಸ್ರರಶ್ಮಿಯನ್ನು ಮೋಡಗಳಿಂದ ಮರೆಮಾಡಿ ವಂಚಿಸಿ ಕಾರ್ಯ ಸಾಧಿಸಿಕೊಂಡ ನಿನ್ನ ಮೈತುಂಬೆಲ್ಲವು ಸಹಸ್ರ ಭಗಗಳುತ್ಪನ್ನ ವಾಗಲಿ, ಸಾಕು ಸಾಕು ನಿನಗಿದಿಷ್ಟೇ ಶಾಪ ಸಾಕು. ನಿನ್ನಲ್ಲಿ ಪ್ರತಿಶಾಪ ನೀಡುವ ನೈತಿಕ ಸಾಮರ್ಥ್ಯವಿದ್ದರೆ ಅದನ್ನೀಗಲೇ ಪ್ರಕಟಗೊಳಿಸು. ಎಂದು ಅತಿ ಸಿಟ್ಟಿನಿಂದ ಶಾಪ ನೀಡಿ ಆ ಕೂಡಲೇ ಗೌತಮನು ಕುದಿಯುವ ಹಾಗು ಸಂತಾಪದ ಹೃದಯದಿಂದ ತಿರುಗಿ ಆಶ್ರಮಕ್ಕೆ ಬಂದನು.

ಸಿಟ್ಟಿನ ಮಾನವನು ಹಿಂದುಮುಂದಿನ ವಿಚಾರಗಳಿಂದ ಹೊರತಾಗಿರುವ ನೆಂಬುದು ಸಟೆಯಲ್ಲ. ತನ್ನ ಅಂತರ್ದೃಷ್ಟಿಯಿಂದ ಇಂದ್ರನ ಕೃತ್ಯವನ್ನರಿತ ಆತನು ಅಹಲ್ಯೆಯ ದೋಷಗಳೆಷ್ಟರಮಟ್ಟಿಗಿರುವವೆಂಬುದನ್ನರಿಯಲಿಲ್ಲ. ಇಂದ್ರನಿಗೆ ಶಾಪಕೊಟ್ಟು ಬಂದ ಭರದಲ್ಲಿಯೇ ಅಹಲ್ಯೆಯನ್ನು ಕುರಿತು–ಎಲೆ ನೀಚೆ! ರಾಜಮಂದಿರದಲ್ಲಿ ಬೆಳೆದ ರಾಜನಂದಿನಿಯಾದ ನೀನು ಈ ಕುಟೀರದ ವಿಧಿನಿಯಮಗಳನ್ನು ಮೀರಿ ಆ ದುಷ್ಟ ಇಂದ್ರನ ದುಷ್ಕೃತ್ಯಕ್ಕೆ ಅನುಮತಿಯನ್ನೀಡಿ ಪಾಪವನ್ನು ಪದರಿನಲ್ಲಿ ಕಟ್ಟಿಕೊಂಡು ಬಿದ್ದಿ ರುವಿ. ಹೀಗೆ ಬಿದ್ದಲ್ಲಿಯೇ ನೀನು ಕಲ್ಲಾಗಿ ಬಿದ್ದುಬಿಡು. ಇದೇ ನಿನ್ನ ಪಾಪದ ಪರಿಮಾರ್ಜನೆಯು ಎಂದು ಕೋಪದಿಂದ ನುಡಿದನು.

ಪತಿಯ ನುಡಿಗಳನ್ನು ಕೇಳಿ ಅಹಲ್ಯೆಯು ಕಕ್ಕಾವಿಕ್ಕಿಯಾದಳು. ಪುನಃ ಪುನಃ ಆತನ ಪಾದಗಳಿಗೆರಗಲು ಹವಣಿಸಿದಳು ಆತನು-ಪಾಪಿ! ನನ್ನನ್ನು ಸೋಂಕಬೇಡ. ಒಂದುವೇಳೆ ನಿನ್ನಲ್ಲಿ ಅಪರಾಧವಿಲ್ಲವಾದರೆ ನಿನ್ನ ಪತಿಯ ತಪೋಬಲದಿಂದ ನೀನು ಆ ಇಂದ್ರನನ್ನು ದಹಿಸಿ ಸುಟ್ಟುಬಿಡಬೇಕಾಗಿದ್ದಿತು. ನಿಜವಾಗಿ ನಿನ್ನಲ್ಲಿ ದೋಷವಿಲ್ಲದಿದ್ದರೂ ನಾನು ಮಾತ್ರ ಇದನ್ನು ದೋಷವೆಂದು ತಿಳಿಯುತ್ತೇನೆ. ಈ ನನ್ನ ಶಾಪವನ್ನು ನೀನು ಸ್ವೀಕರಿಸಲೇಬೇಕು; ಎಂದು ನುಡಿದು ಆಶ್ರಮದಿಂದ ಹೊರಡಲನುವಾದನು.

ಆಗ ಅಹಲ್ಯೆಯು ಕಂಠ ತುಂಬಿ ಬಂದು ಅವಳು ದೂರಿನಿಂದಲೇ ಪತಿಯ ಪಾದಕ್ಕೆರಗಿ ಪ್ರಭು ನನ್ನ ಉದ್ಧಾರವೆಂದು? ಎಂದು ಕಣ್ಣೀರುದುರಿಸಿ ಬೇಡಿದಳು.

ಸಾಧುಗಳ ಹೃದಯವು ಬಲು ಕೋಮಲ. ಗೌತಮನು ಜ್ಞಾನ ದೃಷ್ಟಿಯಿಂದ ಸಂಪೂರ್ಣ ಅಪರಾಧಿಯು ಇಂದ್ರನೆಂದು ಕಂಡು ಆತನಿಗೆ ಶರೀರವೆಲ್ಲ ಭಗಾಂಕಿತವಾಗಲೆಂದು ಶಾಪ ನೀಡಿದನು. ಅಹಲ್ಯೆಗೆ 'ಶಿಲೆಯಾಗಿ ಬಿದ್ದುಬಿಡು' ಎಂದು ಶಾಪ ನೀಡಿದನು. ತಾನು ಸುರಪತಿಯಾಗಿ ತನ್ನಿಂದುಂಟಾದ ದುಷ್ಕ್ರಿಯೆಗೆ ಹಾಗು ತಾನು ಪಡೆದ ಶಾಪಕ್ಕಾಗಿ ಆತನು ಗೌತಮನ ಚರಣಕ್ಕೆ ವಂದಿಸಿ ಶಾಪ ಪರಿಹಾರಕ್ಕೆ ಅಪೇಕ್ಷಿಸಿದನು. ಅವನಿಗೆ ಗೌತಮನು ಇಂದ್ರಾ! ನನ್ನ ಶಾಪವು ಸಟಿಯಾಗದು. ನಿನ್ನ ಶರೀರ ತುಂಬೆಲ್ಲ ವ್ಯಾಪಿಸಿದ ಭಗಗಳು ನಯನಸ್ವರೂಪದಲ್ಲಿ ಪಲ್ಲಟವಾಗಿ ನೀನುಸಹಸ್ರನಯನನೆಂದು ಎಲ್ಲರಿಂದ ಸಂಬೋಧಿಸಿಕೊಳ್ಳು. ಇದುವೇ ನಿನಗೆ ಶಾಪ ಹಾಗು ಇದುವೇ ನಿನಗೆ ಉಶ್ಶಾಪ ಎಂದು ಹೇಳಿದನು.

ಹಾಗು ಗೌತಮನು ಅಹಲ್ಯೆಯ ದೋಷಾದೋಷಗಳನ್ನು ಜ್ಞಾನ ದೃಷ್ಟಿಯಿಂದ ತಿಳಿದನು. ಅಬಲೆಯಾದ ಇವಳಲ್ಲಿ ತಾತ್ಕಾಲಿಕವಾಗಿ ಉಂಟಾದ ಐಶ್ವರ್ಯದ ಮೋಹವೂ ಪ್ರತಿಕ್ರಿಯೆಯ ಸಾಮರ್ಥ್ಯವಿದ್ದರೂ ಅದನ್ನು ಉಪಯೋಗಿಸದೆ ಇದ್ದುದೂ ಇವೆರಡು ಅಪರಾಧಗಳ ಬಗೆಗೆ 'ನೀನು ಹತ್ತು ಸಾವಿರ ವರುಷ ಕಲ್ಲಾಗು' ಎಂದು ಶಾಪ ನೀಡಿದನು. ಮತ್ತು ಆಕೆ ಬಹು ಪರಿಯಿಂದ ಬೇಡಿಕೊಳ್ಳಹತ್ತಲು ಆತನು ಆಕೆಗೆ ಅಹಲ್ಯೆ! ನೀನು ಈ ಶಾಪವನ್ನು ಕೆಲವೊಂದು ಅವಧಿಯ ವರೆಗೆ ಅನುಭವಿಸು. ಮುಂದೆ ಕೆಲ

ಕಾಲದ ನಂತರ ಅಯೋಧ್ಯೆಯಲ್ಲಿ ಸೂರ್ಯ ವಂಶದ ಅರಸರಾಳುವರು. ಅವರಲ್ಲಿ ಧರ್ಮಿಷ್ಟನಾದ ದಶರಥನ ಮಗನಾದ ಶ್ರೀರಾಮನೆಂಬವನು ಪ್ರಖ್ಯಾತನಾದ ಅರಸನಾಗುವನು. ಆತನು ವಿಶ್ವಾಮಿತ್ರರ ಯಜ್ಞ ರಕ್ಷಣೆ ಮಾಡಿ ಸೀತೆಯ ಪಣವನ್ನು ಮುರಿಯಲು ಮಿಥಿಲೆಗೆ ಹೋಗುವನು. ಅವನು ಹೋಗುವ ಕಾಲಕ್ಕೆ ತಿಳಿಯದೆ ಮಾರ್ಗದಲ್ಲಿ ಬಿದ್ದಿರುವನಿನ್ನನ್ನು ಅರ್ಥಾತ್ ಶಿಲೆಯನ್ನು ತನ್ನ ಪಾದಗಳಿಂದ ತುಳಿದ ಕೂಡಲೆ ನೀನು ಕಲ್ಲಿನ ರೂಪವನ್ನು ಬಿಟ್ಟು ಈ ಮುನ್ನಿನ ರೂಪವನ್ನು ಹೊಂದುವಿ. ನಡೆ ಕಲ್ಲಾಗಿ ಬೀಳುಎಂದು ಗದರಿಸಿ ಕಳಿಸಿ ತಾನು ಆಶ್ರಮದಿಂದ ಹೊರಟು ನಡೆದನು.

## ೧೨. ಶಾಪಿತ ಅಹಲ್ಯೋದ್ಧಾರ

ಇಂದು ಶಾಪಿತ ಅಹಲ್ಯೆಯು ಬ್ರಹ್ಮಾರಣ್ಯದಲ್ಲಿ ಶಿಲೆಯಾಗಿ ಬಿದ್ದು ಅದೆಷ್ಟೋ ವರುಷಗಳು ಗತಿಸಿದವು. ಗೌತಮ ಋಷಿಯ ಆಶ್ರಮವೊಂದೇ ಕುರುಹು ದರ್ಶಕವಾಗಿ ಇಂದಿನ ಯುಗದ ಜನಗಳಿಂದ ಗುರುತಿಸಲ್ಪಡುತ್ತಿದೆಯೇ ಹೊರತು ಅಹಲ್ಯೆಯು ಶಿಲಾವನಿತೆಯಾಗಿ ಅಲ್ಲಿ ಬಿದ್ದುದನ್ನು ಯಾರೂ ಅರಿಯರು. ಪಾಪ! ಅದೆಂತು ಗೊತ್ತಾಗಬೇಕು. ಅದೆಷ್ಟು ನೂರು, ಸಾವಿರ ವರುಷಗಳು ಗತಿಸಿದವು. ಇದು ವರೆಗೆ ಅಹಲ್ಯಾ ದೇವಿಯ ಚರಿತ್ರೆಯು ಮುಸಮುಸಕಾಗಿ ಸಹ ಇಂದಿನವರಿಗೆ ಕಾಣುತ್ತಿರಲಿಲ್ಲ.

ಈ ಹೊತ್ತು ಅಯೋಧ್ಯೆಯ ನರಪತಿ ದಶರಥರಾಯನ ಮಕ್ಕಳಾದ ಶ್ರೀ ರಾಮ – ಲಕ್ಷ್ಮಣರಿಂದೊಡಗೂಡಿ ವಿಶ್ವಾಮಿತ್ರ ಋಷಿವರ್ಯನು ಈ ಬ್ರಹ್ಮಾರಣ್ಯದಲ್ಲಿ ಹಾಯ್ದು ಲಗುಬಗೆಯಿಂದ ನಡೆದಿರುವರು. ಋಷಿವರ್ಯನ ಎಡಬಲದಲ್ಲಿ ಆ ಬಂಧುದ್ವಯರು ಹಾಗು ಹಿಂದು ಮುಂದು ಅವರ ಶಿಷ್ಯಸ್ತೋಮವು. ಒಂದೇ ಆಳತೆಯ ಹೆಜ್ಜೆಯಮೇಲೆ ಹೆಜ್ಜೆಯನ್ನಿಡುತ್ತ ಅವರೆಲ್ಲರ ಮಾರ್ಗಕ್ರಮಣ ಸಾಗಿದೆ. ಶ್ರೀರಾಮ ಮೊದಲಾಗಿ ಎಲ್ಲರೂ ಋಷಿವರನ ಮುಖೋದ್ಗಳಿತ ವಾಕ್ಯಗಳನ್ನು ಕೇಳುವಲ್ಲಿ ಆತುರತೆಯುಳ್ಳವರಾಗಿ ತಮ್ಮ ದೃಷ್ಟಿಯನ್ನೂ ಶ್ರವಣಗಳನ್ನೂ ಅವರ ಕಡೆಗೇ ಚಾಚಿರುವರು. ಬರಬರುತ್ತ ಮಾರ್ಗದಲ್ಲಿ ಋಷಿವರ ವಿಶ್ವಾಮಿತ್ರರು– ಶಿಷ್ಯರೇ! ಇದು ನೋಡಿ, ಇದು ಕಾಮಕೂಪನಾಡಿನ ಗಡಿಸೀಮೆಯು. ಅದೋ, ಆ ಪರ್ವತರಾಜನ ಅಂಕದಿಂದ

ಇಳಿದುಬರುವ ಆತನ ಸುಂದರಾದ ಬ್ರಹ್ಮಪುತ್ರಿಯು. ಪಿತೃ ಗೃಹದಿಂದ ಆಕೆ
ತನ್ನ ಪತಿಯಾದ ನಾಗರಾಜನನ್ನು ಕೂಡಿಕೊಳ್ಳುವದಕ್ಕಾಗಿ ಇತ್ತ ಕಡೆಗೇ
ನಾಗಿ ಬರುವಂತೆ ಕಾಣುತ್ತದೆ. ರಾಮಾ! ಪೌರಾಣಿಕ ಪ್ರಸಿದ್ಧವಾದ
ಬ್ರಹ್ಮಾರಣ್ಯ ಪ್ರದೇಶವನ್ನು ನಾವೀಗ ಸಮೀಪಿಸಿದೆವು. ಇನ್ನು ಕೆಲ ನಿಮಿಷ
ಗಳಲ್ಲಿ ಅಲ್ಲಿ ನಾವು ಸೇರೋಣ. ಅನಿಮಿಷರಾದ ದೇವತೆಗಳ ಕ್ರೀಡಾಂಗಣ
ದಂತೆ ಶೋಭಿಸುವ ಅರಣ್ಯದ ಸೊಬಗನ್ನು ನಿರೀಕ್ಷಿಸು. ಶಿಷ್ಯರೆ! ಬೇಗಬೇಗ
ಮುಂದೆ ಸಾಗಿರಿ. ಓಹೋ! ಈ ಮಾರ್ಗದ ಬದಿಯಲ್ಲಿ ನಿಡಿದಾಗಿ ಬಿದ್ದಿದ್ದ
ಕರಿಯ ಶಿಲೆಯನ್ನು ಕಾಣಿರಿ. ರಾಮಾ! ನೀನು ಈ ಶಿಲೆಯ ಮೇಲೆ ಸ್ವಲ್ಪ
ವೇಳೆ ನಿಂತು ಸುತ್ತಲಿನ ದೃಶ್ಯವನ್ನೆಲ್ಲ ನಿರೀಕ್ಷಿಸು. ಎಂದು ವಿಶ್ವಾಮಿತ್ರ
ಮುನಿಯು ಹೇಳುವದೊಂದೇ ತಡ ಶ್ರೀರಾಮನು ಮಾರ್ಗದಲ್ಲಿರುವ ಆ ಶಿಲೆಯ
ಮೇಲೆ ಹತ್ತಿ ನಿಂತನು. ಕೂಡಲೆ ಅವರೆಲ್ಲರು ದಿಗಿಲುಗೊಳ್ಳುವಂಥ ಪ್ರಸಂಗ
ಉಂಟಾಯಿತು. ರಾಮನು ಆ ಶಿಲೆಯ ಮೇಲೆ ತನ್ನ ಪಾದಗಳನ್ನಿಟ್ಟು ಏರಿ
ನಿಂತ ಕೂಡಲೆ "ಶ್ರೀರಾಮ, ಶ್ರೀರಾಮ, ಶ್ರೀರಾಮ" ಎಂಬ
ನಾಮೋಚ್ಚರಣೆಯು ದೀರ್ಘಸ್ವರವಾಗಿ ಕೇಳಬಂದಿತು. ಎಲ್ಲರೂ ಕಕ್ಕಾವಿಕ್ಕಿ
ಯಾಗಿ ಅತ್ತಿತ್ತ ನೋಡಹತ್ತಿದರು. ಶಿಷ್ಯರೂ ಲಕ್ಷ್ಮಣನೂ ಗಾಬರಿಯಾಗಿ
'ಅದಾರವರು ಶ್ರೀರಾಮನಾಮೋಚ್ಚಾರಣೆ ಗೈಯುವವರು?' ಎಂದು ಸಂದೇಹ
ದೃಷ್ಟಿಯಿಂದ ಅತ್ತಿತ್ತ ಸುತ್ತೆಲ್ಲವೂ ಮಿಕಮಿಕಿ ನೋಡಹತ್ತಿದರು. ಶ್ರೀರಾಮನ
ಸಂದಿಗ್ಧ ಭಾವನೆಯೂ ಋಷಿವರ್ಯನ ಹಸನ್ಮುಖವೂ ಉಳಿದವರಿಗೆಲ್ಲ ಒಡೆಯ
ಲಾರದ ಒಗಟಾಗಿಬಿಟ್ಟಿತು. ಇಷ್ಟರಲ್ಲಿಯೇ ಆ ನಾಮಘರ್ಜನೆಯನಂತರವೇ ಆ
ಶಿಲೆಯಿಂದ ಸುಂದರ ಸ್ತ್ರೀಯೊಬ್ಬಳು ಹೊರಬಂದಳು. ಆಕೆ ತನ್ನ ಎರಡೂ ಕರ
ಕಮಲಗಳನ್ನು ಜೋಡಿಸಿ ಶ್ರೀರಾಮನ ಪಾದಕ್ಕೆ ವಂದಿಸಿ– ಜಯಜಯ
ಶುಭನಾಮಾ, ಸರ್ವಲೋಕಾಭಿರಾಮಾ, ಜಯಜಯರವಿಧಾಮಾ ಚಾರ
ಸತ್ಕೀರ್ತಿಸೋಮ ಎಂದು ಸ್ತುತಿಸಿ– ದೇವಾ! ಈ ಪತಿತೆಯಾದ ನನ್ನನ್ನು
ಉದ್ಧರಿಸು ಎಂದು ಬೇಡಿಕೊಂಡು ಎದ್ದುನಿಂತಳು. ಶ್ರೀರಾಮನ ಮುಖದಿಂದ
ತಥಾಸ್ತು; ನಿನಗೆ ಶುಭ ಮಂಗಲವಾಗಲಿ; ನಿನ್ನ ಕೀರ್ತಿಯು ಯುಗಾನು
ಯುಗಗಳಲ್ಲಿ ಚಿರಂತನವಾಗಿ ಮೆರೆಯಲಿ ಎಂದು ಉಚ್ಚರಿತವಾದವೇ ಹೊರತು
ನೀನು ಯಾರು? ಶಿಲೆಯಿಂದ ಉದ್ಧೃತವಾದುದೆಂತು? ಇವಾವನ್ನೂ ಕೇಳಲು

ಅವನಿಗೆ ಅವಸರ ದೊರೆಯಲಿಲ್ಲ. ಲಕ್ಷ್ಮಣನೂ ಋಷಿಗಳ ಶಿಷ್ಯಸ್ತೋಮವೂ ಇದೆಲ್ಲ ದೃಶ್ಯವನ್ನು ಕೇವಲ ನೆಟ್ಟ ದೃಷ್ಟಿಯಿಂದ ನೋಡುತ್ತ ನಿಂತಿದ್ದರಲ್ಲದೆ ಈ ವಿಷಯದ ಬಗ್ಗೆ ಅವರ ಮತಿಯು ಏನೊಂದನ್ನರಿಯದೆ ಸುಪ್ತವಾಗಿದ್ದಿತು. ಶ್ರೀರಾಮನು ಸಾಕ್ಷಾತ್ ಅವತಾರಿಕನಾದರೂ ಈ ಚಮತ್ಕಾರದ ರಹಸ್ಯವನ್ನರಿಯದ ಸಾಮಾನ್ಯರಂತೆ ನಟಿಸಿ ವಿಶ್ವಾಮಿತ್ರರನ್ನು ಕುರಿತು–ಋಷಿವರ್ಯ! ಶಿಲೆಯಿಂದ ಈ ಮಹಾನ್ ಸುಂದರಿಯು ಇಂದು ಉದ್ಭೂತವಾದುದು ಇದು ಜಗತ್ತಿಗೇ ಹೊಸತು ಎಂದು ನಮ್ಮೆಲ್ಲರ ಭಾವನೆಯಾಗಿದೆ. ಇದರ ಗೂಢವೇನು? ನಮಗೆ ತಿಳಿಸುವದಾಗಬೇಕು ಎಂದು ಕೈಮುಗಿದು ಬೇಡಿಕೊಂಡನು. ಲಕ್ಷ್ಮಣನೂ ಉಳಿದ ಶಿಷ್ಯರೂ ತಮ್ಮ ಜಿಜ್ಞಾಸುಯುಕ್ತವಾದ ಅವ್ಯಕ್ತ ಪ್ರಶ್ನೆಯೇ ಶ್ರೀ ರಾಮನಿಂದ ಕೇಳಲ್ಪಟ್ಟಿತೆಂದು ತಿಳಿದರು. ಹಾಗು ಅವರು ಋಷಿಗಳಿಂದ ಬರುವ ಉತ್ತರದ ಮಾರ್ಗ ನಿರೀಕ್ಷಿಸುತ್ತ ಕೈಮುಗಿದುಕೊಂಡು ನಿಂತರು.

ವಿಶ್ವಾಮಿತ್ರ ಮಹಾಮುನಿಯು ಶ್ರೀ ರಾಮನ ಆತುರತೆಯ ಪ್ರಶ್ನೆಯನ್ನು ಕೇಳಿ ಯೌಗಿಕ ದೃಷ್ಟಿಯಿಂದ ಕಂಡು– ಶ್ರೀರಾಮಾ ಈಕೆ ಅಸಾಮಾನ್ಯ ಸ್ತ್ರೀಯಳು. ನ್ಯಾಯ ಶಾಸ್ತ್ರಗಳನ್ನೆಲ್ಲ ರಚಿಸಿದ ಋಷಿವರ್ಯಗೌತಮ ರಾಜನ ಚರಿತ್ರೆಯನ್ನು ನೀನು ಕೇಳಿರಲಿಕ್ಕಿಲ್ಲವೆ? ನೀನು ಆತನನ್ನು ಮಾನವ ದೃಷ್ಟಿಯಿಂದ ಕಂಡಿರಲಿಕ್ಕಿಲ್ಲ. ಅದೇನೇಯಿರಲಿ ಆ ಗೌತಮ ಋಷಿವರನ ಧರ್ಮಪತ್ನಿ ಅಹಲ್ಯಾದೇವಿ ಈಕೆ. ಒಂದಾನೊಂದು ದಿನ ಸುರಪತಿಇಂದ್ರನು ಈಕೆಯ ಚೆಲುವಿಕೆಗೆ ಮೋಹಿಸಿ ಇವಳಲ್ಲಿ ದುಷ್ಕೃಯೆಗೆ ಪ್ರವೃತ್ತನಾದನು. ಅದರ ಪರಿಣಾಮವಾಗಿ ಆ ಇಂದ್ರನು ಈಕೆಯ ಪತಿರಾಯನಿಂದ ಶಾಪ ಹೊಂದಿದನು. ಹಾಗು ಇಂದ್ರನು ಮಾಡಿದ ಪಾಪ ಕರ್ಮದ ಫಲವಾಗಿ ಈಕೆಯೂ ಪತಿಯಿಂದ ಶಾಪಿತಳಾಗಿ ಶಿಲೆಯ ರೂಪದಿಂದ ಇಲ್ಲಿಯೇ ಅಂದರೆ ಗೌತಮ ಋಷಿಯ ಆಶ್ರಮದಲ್ಲಿಯೇ ಬಿದ್ದುಬಿಟ್ಟಳು. ಇದೇ ಆ ಗೌತಮ ಋಷಿಯ ಆಶ್ರಮದ ಕುರುಹು.

ಶ್ರೀ ರಾಮ! ಶಾಪಿತಳಾದ ಈ ಅಹಲ್ಯೆಯು ಪಶ್ಚಾತ್ತಾಪಗೊಂಡು ಪತಿಯನ್ನು ಅನನ್ಯ ಭಾವದಿಂದ ಬೇಡಿಕೊಳ್ಳಲು ಆ ದಯಾಮಯನಾದ ಗೌತಮ ಋಷಿಯು— 'ಇನ್ನು ಕೆಲ ಕಾಲದ ನಂತರ ವಿಶ್ವಾಮಿತ್ರನ ಯಜ್ಞ ರಕ್ಷಣಕ್ಕಾಗಿ ಅಯೋಧ್ಯೆಯ ಅರಸು ದಶರಥನ ಮಗ ರಾಮನು

ಸೀತಾ ಸ್ವಯಂವರ ಸಮಾರಂಭಕ್ಕಾಗಿ ಮಿಥಿಲೆಗೆ ತೆರಳುವನು. ಆತನು ಮಾರ್ಗದಲ್ಲಿ ಬಿದ್ದಿದ್ದ ನೀನು ಆ ರಾಮನ ಪಾದರೇಣುವಿನ ಸಂಪರ್ಕವಾಗಿ ನೀನು ಶಾಪದಿಂದ ಉದ್ಧಾರಳಾಗುವಿ' ಎಂದು ಉಶ್ಶಾಪ ನೀಡಿದನು.

ಶ್ರೀ ರಾಮ! ಲಕ್ಷ್ಮಣ! ಶಿಷ್ಯರೇ! ಅವಳೇ ಈ ಅಹಲ್ಯಾದೇವಿಯು. ಗೌತಮನ ಧರ್ಮಪತ್ನಿಯು. ಜಗತ್ತಿಗೇ ಈಕೆ ಪೂಜ್ಯಳು. ಎಲ್ಲರಿಂದ ವಂದ್ಯಳು. ಈಕೆಯ ನಿತ್ಯಸ್ಮರಣಮಾತ್ರದಿಂದ ಜನರೆಲ್ಲರು ಪುನೀತರಾಗುವರು. ಇಷ್ಟಾರ್ಥ ಪಡೆಯುವರು. ಪಾಪ ಲೇಪಗಳಿಂದ ದೂರಾಗುವರು.

ಎಂದು ವಿಶ್ವಾಮಿತ್ರನು ನುಡಿಯುತ್ತಿರುವಷ್ಟರಲ್ಲಿಯೇ ಶ್ರೀರಾಮ ಲಕ್ಷ್ಮಣ ಮೊದಲಾಗಿ ಎಲ್ಲರೂ ಆ ಅಹಲ್ಯಾಮಾತೆಯ ಚರಣಗಳಿಗೆ ನಮಸ್ಕರಿಸಿ 'ಮಾತೆ ಋಷಿಪತ್ನಿಯೇ ಉದ್ಧರಿಸು' ಎಂದು ಕಣ್ತೆರೆದು ನೋಡುವಷ್ಟರಲ್ಲಿಯೇ ಸಾಕ್ಷಾತ್ ಗೌತಮ ಋಷಿಯ ವಾಮಭಾಗದಲ್ಲಿ ಅಹಲ್ಯೆಯು. ಎಲ್ಲರೂ ಕಣ್ತುಂಬ ಕಂಡರು. ಮನದಣಿವಂತೆ ಸ್ತುತಿಗೈದರು. ತಮ್ಮ ಧನ್ಯತೆಯನ್ನು ವ್ಯಕ್ತಪಡಿಸಿದರು'–ಧನ್ಯ ಧನ್ಯ ಅಹಲ್ಯಾಮಾತೇ! ನೀನು ಧನ್ಯ! ಎಂದು ಉಚ್ಚರಿಸುತ್ತ ಅವರೆಲ್ಲರೂ ಮಿಥಿಲಾ ಪಟ್ಟಣಕ್ಕೆ ತೆರಳಿದರು.

## ॥ ಅಹಲ್ಯಾ ಸ್ಮರಣಂ ॥

ಅಹಲ್ಯಾ, ದ್ರೌಪದಿ, ಸೀತಾ, ತಾರಾ, ಮಂಡೋದರಿ ತಥಾ ।
ಪಂಚಕಂನ್ಯಾ ಸ್ಮರೇನ್ನಿತ್ಯಂ ಮಹಾಪಾತಕ ನಾಶನಂ ॥

## ॥ ಅಹಲ್ಯಾಕೃತ ಶ್ರೀರಾಮ ಸ್ತೋತ್ರಂ ॥

ಶ್ರೀ ಗಣೇಶಾಯನಮಃ ಶ್ರೀ ಶಾರದಾ ಗುರುಭ್ಯೋನಮಃ॥ಅಹಲ್ಯೋವಾಚಃ-

ಅಹೋ ಕೃತಾಸ್ಮಿ ಜಗನ್ನಿವಾಸತೇ ।
ಪಾದಾಬ್ಜ ಸಲ್ಲಗ್ನ ರಜಃಕಣಾದಹಂ ॥
ಸ್ಪೃಶಾಮಿ ಯತ್ಪದ್ಮಜ ಶಂಕರಾದಿಭಿಃ ।
ವಿಮೃಗ್ಯತೇ ರಂಧಿತ ಮಾನಸೈಸ್ಸದಾ ॥೧॥

ಅಹೋ ವಿಚಿತ್ರಂ ತವರಾಮ ಚೇಷ್ಟಿತಂ ।
ಮನುಷ್ಯಭಾವೇನ ವಿಮೋಹಿತಂ ಜಗತ್ ।
ಚಲಸ್ಯಜಸ್ರಂ ಚರಣಾದಿ ವರ್ಜಿತಃ ।
ಸಂಪೂರ್ಣ ಆನಂದಮಯೋತಿ ಮಾಯಿಕಃ ॥೨॥

ಯತ್ಪಾದ ಪಂಕಜ ಪರಾಗ ಪವಿತ್ರಗಾತ್ರಾ ।
ಭಾಗೀರಥೀಭವ ವಿರಿಂಚಿ ಮುಖಾನ್ ಪುನಾತಿ ॥
ಸಾಕ್ಷಾತ್ ಸ ಏವ ಮಮ ದೃಗ್ವಿಷಯೋಯದಾಸ್ತೇ ।
ಕಿಂವರ್ಣ್ಯತೇ ಮಮ ಪುರಾಕೃತ ಭಾಗದೇಯಂ ॥೩॥

ಮರ್ತ್ಯಾವತಾರೇ ಮನುಜಾಕೃತಿಂ ಹರಿಂ ।
ರಾಮಾಭಿಧೇಯಂ ರಮಣೀಯ ದೇಹಿನಂ ॥
ಧನುರ್ಧರಂ ಪದ್ಮ ವಿಶಾಲ ಲೋಚನಂ ।
ಭಜಾಮಿನಿತ್ಯಂ ನ ಪರಾನ್ ಭಜಿಷ್ಯೇ ॥೪॥

ಯತ್ಪಾದ ಪಂಕಜ ರಜಃ ಶ್ರುನಿಭಿರ್ವಿಮೃಗ್ಯಂ ।
ಯನ್ನಾಭಿ ಪಂಕಜ ಭವಃ ಕಮಲಾಸನಶ್ಚ ॥
ಯನ್ನಾಮ ಸಾರರಸಿಕೋ ಭಗವಾನ್ ಪುರಾರಿಃ ।
ತಂ ರಾಮಚಂದ್ರಮನಿಶಂ ಹೃದಿಭಾವಯಾಮಿ ॥೫॥

ಯಸ್ಯಾವತಾರ ಚರಿತಾನಿ ವಿರಿಂಚಿ ಲೋಕೇ ।
ಗಾಯಂತಿ ನಾರದ ಮುಖಾ ಭವ ಪದ್ಮಜಾದ್ಯಾಃ ॥
ಆನಂದಜಾಶ್ರು ಪರಿಷಿಕ್ತ ಕುಚಾಗ್ರ ಸೀಮಾ ।
ವಾಗೀಶ್ವರೀಚ ತಮಹಂ ಶರಣಂ ಪ್ರಪದ್ಯೇ ॥೬॥

ಸೋಯಂ ಪರಾತ್ಮಾ ಪುರುಷಃ ಪುರಾಣ ।
ಏಷಃ ಸ್ವಯಂ ಜ್ಯೋತಿರನಂತ ಆದ್ಯಃ ॥
ಮಾಯಾತನುಂ ಲೋಕ ವಿಮೋಹನೀಯಾಂ ।
ಧತ್ತೇ ಪರಾನುಗ್ರಹ ಏಷರಾಮಃ ॥೭॥

ಅಯಂ ಹಿ ವಿಶ್ವೋದ್ಭವ ಸಂಯಮಾನಾಂ ।
ಏಕಃ ಸ್ವಮಾಯಾ ಗುಣಬಿಂಬಿತೋಯಃ ॥
ವಿರಿಂಚಿ ವಿಷ್ಣ್ವೀಶ್ವರ ನಾಮ ಭೇದಾನ್ ।
ಧತ್ತೇ ಸ್ವತಂತ್ರಃ ಪರಿಪೂರ್ಣ ಆತ್ಮಾ ॥೮॥

ನಮೋಸ್ತು ತೇ ರಾಮ ತವಾಂಘ್ರಿ ಪಂಕಜಂ ।
ಶ್ರೀಯಾ ಧೃತಂ ವಕ್ಷಸಿ ಲಾಲಿತಂ ಪ್ರಿಯಾತ್ ॥
ಆಕ್ರಾಂತಮೇಕೇನ ಜಗತ್ರಯಂಪುರಾ ।
ಧ್ಯೇಯಂ ಮುನೀಂದ್ರೈರಭಿಮಾನ ವರ್ಜಿತೈಃ ॥೯॥

ಜಗತಾಮಾದಿಭೂತಸ್ತ್ವಂ ಜಗತ್ವಂ ಜಗದಾಶ್ರಯ ।
ಸರ್ವಭೂತೇಷ್ವಸಂಬದ್ಧ ಏಕೋಭಾತಿ ಭವಾನ್ ಪರಃ ॥೧೦॥

ಓಂಕಾರ ವಾಚಸ್ತ್ವಂರಾಮ ವಾಚಾವಿಷಯಃ ಪುಮಾನ್ ॥
ವಾಚ್ಯ-ವಾಚಕ ಭೇದೇನ ಭವಾನೇವ ಜಗನ್ಮಯಃ ॥ ೧೧ ॥

ಕಾರ್ಯ-ಕಾರಣ ಕರ್ತೃತ್ವ ಫಲ ಸಾಧನ ಭೇದತಃ ॥
ಏಕೋ ವಿಭಾಸಿ ರಾಮತ್ವಂ ಮಾಯಯಾ ಬಹುರೂಪಯಾ ॥ ೧೨ ॥

ತ್ವನ್ಮಾಯಾ ಮೋಹಿತಧಿಯಸ್ತ್ವಾಂ ನ ಜಾನಂತಿ ತತ್ವತಃ ॥
ಮಾನುಷಂ ತ್ವಾಭಿಮನ್ಯಂತೇ ಮಾಯಿನಂ ಪರಮೇಶ್ವರಂ ॥ ೧೩ ॥

ಆಕಾಶವತ್ ತ್ವಂ ಸರ್ವತ್ರ ಬಹಿರಂತರ್ಗತೋಮಲಃ ॥
ಅಸಂಗೋ ಅಚಲೋ ನಿತ್ಯಃ ಶುದ್ಧೋ ಬುದ್ಧ ಸದವ್ಯಯಃ ॥ ೧೪ ॥

ಯೋಷಿನ್ ಮೂಢಾಹಮಜ್ಞಾತೇ ತತ್ವಂ ಜಾನೇ ಕಥಂ ವಿಭೋ ॥
ತಸ್ಮಾತ್ ತೇ ಶತಶೋರಾಮ ನಮುಸ್ಕುರ್ಯಾಮನನ್ಯಧೀಃ ॥ ೧೫ ॥

ದೇವ ಮೇ ಯತ್ರ ಕುತ್ರಾಪಿ ಸ್ಥಿತಾಯಾ ಅಪಿ ಸರ್ವದಾ ॥
ತ್ವತ್ಪಾದ ಕಮಲೇ ಸಕ್ತಾ ಭಕ್ತಿರೇವ ಸದಾಸ್ತುಮೇ ॥ ೧೬ ॥

ನಮಸ್ತೇ ಪುರುಷಾಧ್ಯಕ್ಷ ನಮಸ್ತೇ ಭಕ್ತವತ್ಸಲ ॥
ನಮಸ್ತೇಸ್ತು ಹೃಷೀಕೇಶ ನಾರಾಯಣ ನಮೋಸ್ತುತೇ ॥೧೭॥

ಭವ ಭಯ ಹರಮೇಕಂ ಭಾನುಕೋಟಿ ಪ್ರಕಾಶಂ ।
ಕರಧೃತ ಶರಚಾಪಂ ಕಾಲಮೇಘಾವ ಭಾಸಂ ॥
ಕನಕ ರುಚಿರ ವಸ್ತ್ರಂ ರತ್ನವತ್ ಕುಂಡಲಾಢ್ಯಂ ।
ಕಮಲ ವಿಶದ ನೇತ್ರಂ ಸಾನುಜಂ ರಾಮಮೀಡೇ ॥ ೧೮ ॥

ಸ್ತುತ್ವೈವ ಪುರುಷಂ ಸಾಕ್ಷಾತ್ ರಾಘವಂ ಪುರತಃ ಸ್ಥಿತಂ ।
ಪರಿಕ್ರಮ್ಯ ಪ್ರಣಮ್ಯಾಶು ಸಾನುಜ್ಞಾತಾ ಯಯೌ ಪತಿಂ ॥ ೧೯ ॥

ಅಹಲ್ಯಯಾ ಕೃತಂ ಸ್ತೋತ್ರಂ ಯಃ ಪಠೇತ್ ಭಕ್ತಿಸಂಯುತಃ ।
ಸಮುಚ್ಯತೇಽಖಿಲೈಃ ಪಾಪೈಃ ಪರ ಬ್ರಹ್ಮಾಧಿಗಚ್ಛತಿ ॥ ೨೦ ॥

ಪುತ್ರಾದ್ಯರ್ಥೀ ಪಠೇದ್ಭಕ್ತ್ಯಾರಾಮಂ ಹೃದಿ ನಿಧಾಯ ಚ ॥
ಸಂವತ್ಸರೇಣ ಖಲುಂ ಲಭತೇವಂಧ್ಯಾ ಅಪಿ ಸುಪುತ್ರಕಂ ॥ ೨೧ ॥

ಸರ್ವಾನ್ ಕಾಮಾನ್ ಅವಾಪ್ನೋತಿ ರಾಮಚಂದ್ರ ಪ್ರಸಾದತಃ ॥ ೨೨ ॥

ಬ್ರಹ್ಮಘ್ನೋ ಗುರುತಲ್ಪಗೋಽಪಿ ಪುರುಷಃ ಸ್ತೇಯೀಸುರಾಪೋಽಪಿ ವಾ ।
ಮಾತೃ, ಭ್ರಾತೃವಿ ಹಿಂಸಕೋಽಪಿ ಸತತಂ ಭೋಗೈಕ ಬದ್ಧಾದರಃ ॥
ನಿತ್ಯಂ ಸ್ತೋತ್ರಮಿದಂ ಜಪನ್ ರಘುಪತಿಂ ಭಕ್ತ್ಯಾಹೃದಿಸ್ಥಂ ಸ್ಮರನ್ ।
ಧ್ಯಾಯನ್ ಮುಕ್ತಿಮುಪೈತಿ ಕಿಂ ಪುನರಸೌ ಸ್ವಾಚಾರ ಯುಕ್ತೋನರಃ ॥೨೩॥

ಇತಿ ಶ್ರೀಮತ್ ಅಧ್ಯಾತ್ಮ ರಾಮಾಯಣೇ ಉಮಾ ಮಹೇಶ್ವರ ಸಂವಾದೇ
ಬಾಲಕಾಂಡಾಂತರ್ಗತಂ ಅಹಲ್ಯಾ ವಿರಚಿತಂ ಶ್ರೀರಾಮಚಂದ್ರ ಸ್ತೋತ್ರಂ

**ಸಂಪೂರ್ಣಂ**

ಶ್ರೀರಾಮ